KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೩ | ಬೆಂಗಳೂರು, ಗುರುವಾರ, ಜುಲೈ ೩, ೨೦೦೮ (ಆಷಾಢ ೧೨, ಶಕ ವರ್ಷ ೧೯೩೦) | ಸಂಚಿಕೆ ೨೭ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಪೊಲೀಸ್ ಇಲಾಖೆ**

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಪೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ: 7/ ಡಿಸಿಪಿ/ ಸಂ.ಪೂ/2008, ದಿನಾಂಕ:13ನೇ ಮಾರ್ಚ್, 2008**

ಬೆಂಗಳೂರು ನಗರ– ಇಂದಿರಾನಗರ ಸಂಚಾರ ಪೊಲೀಸ್ ಠಾಣೆಯ ಸರಹದ್ದಿಗೆ ಸೇರಿರುವ ಜೀವನಭೀಮಾನಗರ ಎಲ್.ಐ.ಸಿ. ಕಾಲೋನಿಯ 7ನೇ ಮುಖ್ಯ ರಸ್ತೆ ಹಾಗೂ 9ನೇ 'ಬಿ' ಮುಖ್ಯ ರಸ್ತೆಯಲ್ಲಿ ಮತ್ತು 8, 9, 10 ಮತ್ತು 11ನೇ ಕ್ರಾಸ್ ರಸ್ತೆಗಳ ಎರಡೂ ಬದಿಯಲ್ಲಿ ವಾಸದ ಮನೆಗಳು, ಖಾಸಗಿ ಕಂಪನಿಗಳಿರುತ್ತವೆ. ಈ ರಸ್ತೆಯಲ್ಲಿ ರಸ್ತೆಯ ಎರಡೂ ಬದಿಯಲ್ಲಿ ದ್ವಿಚಕ್ರ ಮತ್ತು ನಾಲ್ಕು ಚಕ್ರದ ವಾಹನಗಳನ್ನು ನಿಲ್ಲಿಸುತ್ತಿರುವುದರಿಂದ ರಸ್ತೆಯ ಬಹುಪಾಲು ಭಾಗ ವಾಹನ ನಿಲುಗಡೆಗಾಗಿ ಬಳಕೆಯಾಗುತ್ತಿರುವುದರಿಂದ ರಸ್ತೆಯಲ್ಲಿ ವಾಹನಗಳ ಸುಗಮ ಸಂಚಾರಕ್ಕೆ ಅಡಚಣೆ ಉಂಟಾಗಿ ಸಂಚಾರ ಸ್ಥಗಿತಗೊಳ್ಳುತ್ತಿರುವ ಜೊತೆಗೆ ರಸ್ತೆಯ ಉದ್ದಕ್ಕೂ ವಾಹನಗಳು ನಿಲುಗಡೆಗೊಂಡು ವಾಹನಗಳ ಮತ್ತು ಪಾದಚಾರಿಗಳ ಸುಗಮ ಸಂಚಾರಕ್ಕೆ ತುಂಬಾ ತೊಂದರೆಯಾಗಿರುತ್ತೆ. ಈ ರಸ್ತೆಗಳಲ್ಲಿ ಸಂಚಾರ ದಟ್ಟಣೆಯನ್ನು ವ್ಯವಸ್ಥಿತವಾಗಿ ನಿಯಂತ್ರಿಸಲು ಹಾಗೂ ಸಂಚಾರವು ಸರಾಗವಾಗಿ ಚಲಿಸಲು ಸಹಾಯಕವಾಗುವಂತೆ ಮತ್ತು ಸಾರ್ವಜನಿಕರ ಸಂಚಾರದ ಹಿತದೃಷ್ಟಿಯಿಂದ ರಸ್ತೆಗಳ ಒಂದು ಬದಿಯಲ್ಲಿ ವಾಹನ ನಿಲುಗಡೆಯನ್ನು ನಿಷೇಧಿಸಿ ಮತ್ತೊಂದು ಬದಿಯಲ್ಲಿ ವಾಹನ ನಿಲುಗಡೆ ವ್ಯವಸ್ಥೆ ಜಾರಿಗೆ ತರುವುದು ಅವಶ್ಯಕವಾಗಿರುತ್ತೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್. ಅಚ್ಯುತರಾವ್, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ವಾಹನ ನಿಲುಗಡೆ/ ನಿಷೇಧ ಸಂಬಂಧ ಕೆಳಕಂಡಂತೆ ಆದೇಶಿಸಿರುತ್ತೇನೆ.

1) ಜೀವನಭೀಮಾ ನಗರ ಎಲ್.ಐ.ಸಿ. ಕಾಲೋನಿಯ 7ನೇ ಮುಖ್ಯ ರಸ್ತೆ ಮತ್ತು 9ನೇ 'ಬಿ' ಮುಖ್ಯ ರಸ್ತೆಯಲ್ಲಿ ರಸ್ತೆಯ ದಕ್ಷಿಣ ದಿಕ್ಕಿನಲ್ಲಿ ವಾಹನಗಳ ನಿಲುಗಡೆಗೆ (ಇಂಟರ್‌ಸೆಕ್ಷನ್‌ನಿಂದ 50 ಅಡಿ ಹೊರತುಪಡಿಸಿ) ವ್ಯವಸ್ಥೆಯನ್ನು ಕಲ್ಪಿಸಿ ರಸ್ತೆಯ ಉತ್ತರ ದಿಕ್ಕಿನಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

2) ಜೀವನಭೀಮಾ ನಗರ ಎಲ್.ಐ.ಸಿ. ಕಾಲೋನಿಯ 8, 9, 10 ಮತ್ತು 11ನೇ ಕ್ರಾಸ್ ರಸ್ತೆಗಳಲ್ಲಿ ಪೂರ್ವ ದಿಕ್ಕಿನಲ್ಲಿ ವಾಹನಗಳ ನಿಲುಗಡೆಗೆ (ಇಂಟರ್‌ಸೆಕ್ಷನ್‌ನಿಂದ 50 ಅಡಿ ಹೊರತುಪಡಿಸಿ) ವ್ಯವಸ್ಥೆಯನ್ನು ಕಲ್ಪಿಸಿ ರಸ್ತೆಯ ಪಶ್ಚಿಮ ದಿಕ್ಕಿನಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:23.03.2008 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ:13.03.2008 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎನ್. ಅಚ್ಯುತರಾವ್**

ಪಿ.ಆರ್.342 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು (ಉತ್ತರ), ಯಶವಂತಪುರ, ಬೆಂಗಳೂರು–22, ಇವರ ಕಛೇರಿ ನಡಾವಳಿ**

**ಉಪಸ್ಥಿತರು:** ಶ್ರೀ ಕೆ.ಟಿ. ಹಾಲಸ್ವಾಮಿ,

ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ಬೆಂಗಳೂರು (ಉತ್ತರ).

**ವಿಷಯ:** ವಾಹನ ಸಂಖ್ಯೆ:MED-5519 (ಇ.ಐ.ಬಿ.)ರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಮಾಲೀಕರ ಅರ್ಜಿ ದಿನಾಂಕ: 22.04.2008.
2) ಮೋ.ವಾ.ನಿ. ರವರ ವರದಿ ದಿನಾಂಕ:14.05.2008.

**ಪ್ರಸ್ತಾವನೆ:**

ವಾಹನ ಸಂಖ್ಯೆ: MED-5519 ರ ಮಾಲೀಕರಾದ The Principal, Sri Revana Siddeshwara Institute of Technology, Chokkanahalli, Chikkajala Post, Bangalore ರವರು, ದಿನಾಂಕ:22.04.2008ರಂದು ಈ ಕಛೇರಿಗೆ ಅರ್ಜಿ ಸಲ್ಲಿಸಿ, ವಾಹನವು ಹಳೆಯದಾಗಿದ್ದು, ದುರಸ್ತಿ ಮಾಡಲಾರದ ಸ್ಥಿತಿಯಲ್ಲಿರುವುದರಿಂದ ನೋಂದಣಿಯನ್ನು ರದ್ಧುಪಡಿಸಲು ಅನುಮತಿ ಕೋರಿರುತ್ತಾರೆ. ಈ ಕಛೇರಿಯ ಮೋಟಾರು ವಾಹನ ನಿರೀಕ್ಷಕರು ವಾಹನವನ್ನು ಪರೀಕ್ಷಿಸಿ, ದಿನಾಂಕ:14.05.2008ರಂದು ವರದಿ ಸಲ್ಲಿಸಿದ್ದು, ವಾಹನವು ದುರಸ್ತಿ ಮಾಡಲಾಗದ ಸ್ಥಿತಿಯಲ್ಲಿದ್ದು, ರಸ್ತೆಯಲ್ಲಿ ಓಡಾಡಲು ಯೋಗ್ಯವಾಗಿಲ್ಲದ ಕಾರಣ ವಾಹನದ ನೋಂದಣಿಯನ್ನು ರದ್ಧುಪಡಿಸಬಹುದು ಎಂದು ಶಿಫಾರಸ್ಸು ಮಾಡಿರುತ್ತಾರೆ. ವಾಹನಕ್ಕೆ ತೆರಿಗೆಯನ್ನು 30.06.2008 ವರೆಗೆ ಪಾವತಿಸಿದೆ.

ಈ ಮೇಲ್ಕಂಡ ಕಾರಣಗಳಿಂದ ಮೋಟಾರು ವಾಹನ ಸಂಖ್ಯೆ: MED-5519 ರ ನೋಂದಣಿಯನ್ನು ರದ್ಧುಮಾಡಿ ಈ ಕೆಳಗಿನಂತೆ ಆದೇಶಿಸಿರುತ್ತೇನೆ.

**ಆದೇಶ ಸಂಖ್ಯೆ: ಪ್ರಾ.ಸಾ.ಅ./ ಬೆಂ(ಉ)/ MED-5519/08-09 ದಿನಾಂಕ:14ನೇ ಮೇ, 2008**

ಕೇಂದ್ರ ಮೋಟಾರು ವಾಹನ ಕಾಯ್ದೆ 1988ರ ವಿಧಿ 55 (2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕೆ.ಟಿ. ಹಾಲಸ್ವಾಮಿ, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರಿ ಆದ ನಾನು, ಮೇಲ್ಕಂಡ ಕಾರಣಗಳಿಂದಾಗಿ, ಮೋಟಾರು ವಾಹನ ಸಂಖ್ಯೆ: MED-5519 (ಇ.ಐ.ಬಿ.) ರ ಮೇಲೆ ಏನಾದರೂ ತೆರಿಗೆ, ಆಡಿಟ್ ಇಲಾಖಾ ಪ್ರಕರಣಗಳು ಬಾಕಿ ಇರುವುದು ಕಂಡು ಬಂದರೆ ಅದನ್ನು ವಾಹನದ ಮಾಲೀಕರೇ ಕಟ್ಟಬೇಕೆಂಬ ನಿಬಂಧನೆಯೊಂದಿಗೆ ಸದರಿ ವಾಹನದ ನೋಂದಣಿಯನ್ನು ರದ್ಧು ಮಾಡಿರುತ್ತೇನೆ.

**ವಾಹನದ ವಿವರಗಳು**

| | | |
|---|---|---|
| 1. | ಮೋಟಾರು ವಾಹನ ಸಂಖ್ಯೆ | MED-5519 |
| 2. | ವಾಹನದ ನೋಂದಣಿ ದಿನಾಂಕ | 05.09.1979 |
| 3. | ವಾಹನದ ತಯಾರಕನ ಹೆಸರು | Tata Diesel |
| 4. | ವಾಹನದ ಮಾದರಿ | E.I.B. |
| 5. | ವಾಹನ ತಯಾರಿಕೆ ವರ್ಷ | 1979 |
| 6. | ಚಾಸಿಸ್ ಸಂಖ್ಯೆ | 344068047020 |
| 7. | ಇಂಜಿನ್ ಸಂಖ್ಯೆ | 692 D02049712 |
| 8. | ಅಶ್ವ ಶಕ್ತಿ | 31.5 HP |
| 9. | ಆಸನ ಸಾಮರ್ಥ್ಯ | 67+1=68 in all |
| 10. | ಮಾಲೀಕರ ಹೆಸರು ಮತ್ತು ವಿಳಾಸ | The Principal, Sri Revana Siddeshwara Institute of Technology, Chokkanahalli, Chikkajala Post, Bangalore |

**ಕೆ.ಟಿ. ಹಾಲಸ್ವಾಮಿ**

ಪಿ.ಆರ್.683 ಪ್ರಾದೇಶಿಕ ಸಾರಿಗೆ ಅಧಿಕಾರಿ, ಯಶವಂತಪುರ,
ಬೆಂಗಳೂರು (ಉತ್ತರ)

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬಹುಮಹಡಿಗಳ ಕಟ್ಟಡ, ಬೆಂಗಳೂರು**

**ಸಂಖ್ಯೆ: ಆಸಾನಿ.136/ ಆಡಳಿತ–2/06–07, ದಿನಾಂಕ:4ನೇ ಫೆಬ್ರವರಿ, 2008**

**ವಿಷಯ:** ಶ್ರೀ ಎಂ. ಷಬ್ಬೀರ್ ಅಹಮದ್, ಸಾಂಖ್ಯಿಕ ನಿರೀಕ್ಷಕರು, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬಳ್ಳಾರಿ ಇವರ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸುವ ಕುರಿತು.

**ಉಲ್ಲೇಖ:** 1) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರ ಪ್ರಸ್ತಾವನೆ ಸಂಖ್ಯೆ: ಜಿಸಂಬ/ ಆಡಳಿತ/ 1933/ 2006–07/ 574, ದಿನಾಂಕ:12.10.2006.

2) ನಿರ್ದೇಶನಾಲಯದ ಇದೇ ಕ್ರಮಾಂಕದ ಆದೇಶದ ಸಂಖ್ಯೆ:ಆಡಳಿತ/ 725/ 2006–07, ದಿನಾಂಕ:02.12.2006.

3) ಕರ್ನಾಟಕ ನಾಗರೀಕ ಸೇವಾ ನಿಯಮಗಳು (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 11ರ ಅನ್ವಯ ಶ್ರೀ ಎಂ. ಷಬ್ಬೀರ್ ಅಹಮದ್, ಸಾಂಖ್ಯಿಕ ನಿರೀಕ್ಷಕರು ಇವರಿಗೆ ಹೊರಡಿಸಲಾದ ಕಾರಣ ಕೇಳುವ ನೋಟೀಸು ದಿನಾಂಕ:27.09.2007.

4) ಶ್ರೀ ಎಂ. ಷಬ್ಬೀರ್ ಅಹಮದ್, ಸಾಂಖ್ಯಿಕ ನಿರೀಕ್ಷಕರು (ನಿಲಂಬನೆಯಲ್ಲಿ) ಇವರು ಸಲ್ಲಿಸಿದ ಲಿಖಿತ ವಿವರಣೆ ದಿನಾಂಕ:06.11.2007.

5) ಇದೇ ಕ್ರಮಾಂಕದ ಆದೇಶದ ದಿನಾಂಕ:04.02.2008.

**ಪ್ರಸ್ತಾವನೆ:**

ಶ್ರೀ ಎಂ. ಷಬ್ಬೀರ್ ಅಹಮದ್, ಸಾಂಖ್ಯಿಕ ನಿರೀಕ್ಷಕರು, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬಳ್ಳಾರಿ ಇವರ ಅನಧಿಕೃತ ಗೈರು ಹಾಜರಾತಿ ಮತ್ತು ಕರ್ತವ್ಯ ಲೋಪದ ಆರೋಪಗಳನ್ನೊಳಗೊಂಡ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬಳ್ಳಾರಿ ಇವರು ಸಲ್ಲಿಸಿದ್ದ ಉಲ್ಲೇಖ (1)ರಲ್ಲಿನ ಪ್ರಸ್ತಾವನೆಯನ್ನು ಪರಿಗಣಿಸಿ, ಸದರಿ ಸಾಂಖ್ಯಿಕ ನಿರೀಕ್ಷಕರನ್ನು ಉಲ್ಲೇಖ (2)ರ ಆದೇಶದಲ್ಲಿ ಸೇವೆಯಿಂದ ಅಮಾನತ್ತುಗೊಳಿಸಲಾಗಿದೆ. ಸದರಿ ಸಾಂಖ್ಯಿಕ ನಿರೀಕ್ಷಕರಿಗೆ, ಉಲ್ಲೇಖ (3)ರಲ್ಲಿನ ಕಾರಣ ಕೇಳುವ ನೋಟೀಸು ನೀಡಿ, ಅವರ ವಿವರಣೆ ಸಲ್ಲಿಸಲು ಸೂಚಿಸಲಾಗಿತ್ತು. ಸದರಿ ಸಾಂಖ್ಯಿಕ ನಿರೀಕ್ಷಕರು ಸಲ್ಲಿಸಿದ ಉಲ್ಲೇಖ (4)ರಲ್ಲಿ ತಿಳಿಸಲಾದ ಅವರ ಲಿಖಿತ ಹೇಳಿಕೆ ದಿನಾಂಕ:06.11.2007ರಲ್ಲಿ "ಅವರ ಮೇಲೆ ಪೂರ್ವಾಗ್ರಹ ಪೀಡಿತರಾಗಿ ಮೇಲಾಧಿಕಾರಿಗಳು ವೈಯಕ್ತಿಕ ದ್ವೇಷದಿಂದ ಆಪಾದನೆ ಮಾಡಿದ್ದು, ಅವರ ಮೇಲಿನ ಆಪಾದನೆಗಳು ಸತ್ಯಕ್ಕೆ ದೂರವಿರುವುದೆಂದು ನಮೂದಿಸಿ, ಆಪಾದನೆಗಳನ್ನು ಅಲ್ಲಗಳೆದಿರುತ್ತಾರೆ. ಆದ್ದರಿಂದ ಅವರ ವಿರುದ್ಧದ ಆಪಾದನೆಗಳ ಕುರಿತು ಇಲಾಖಾ ವಿಚಾರಣೆ ಕೈಗೊಳ್ಳುವ ಅಗತ್ಯವಿರುವುದರಿಂದ ಹಾಗೂ ಸದರಿ ಸಾಂಖ್ಯಿಕ ನಿರೀಕ್ಷಕರನ್ನು ಅಮಾನತ್ತುಗೊಳಿಸಿದ ಆರು ತಿಂಗಳುಗಳ ನಂತರ ಕರ್ನಾಟಕ ನಾಗರೀಕ ಸೇವಾ ನಿಯಮಗಳು, 1957ರ ನಿಯಮ 97, 97ಎ ಮತ್ತು 98ರ ಅನ್ವಯ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬಳ್ಳಾರಿ ಇವರು ಸೂಕ್ತವಾಗಿ ಪರಿಶೀಲಿಸಿ ಪ್ರಸ್ತಾವನೆ ಸಲ್ಲಿಸತಕ್ಕದ್ದಾದರೂ, ಈ ಬಗ್ಗೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ವಿವರಣೆಯನ್ನು ಕಾಯ್ದಿರಿಸಿ, ಸದರಿ ಸಾಂಖ್ಯಿಕ ನಿರೀಕ್ಷಕರನ್ನು ಅವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ, ಸೇವೆಯಲ್ಲಿ ಉಲ್ಲೇಖ (5)ರಲ್ಲಿ ಪುನರ್ ಸ್ಥಾಪಿಸಲಾಗಿದ್ದು, ಅವರ ವಿರುದ್ಧ ಇಲಾಖಾ ವಿಚಾರಣೆಗಾಗಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ: ಆಡಳಿತ/ 688/ 2007–08**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ ಶ್ರೀ ಎಂ. ಷಬ್ಬೀರ್ ಅಹಮದ್, ಸಾಂಖ್ಯಿಕ ನಿರೀಕ್ಷಕರು, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಬಳ್ಳಾರಿ ಇವರ ಅನಧಿಕೃತ ಗೈರು ಹಾಜರಾತಿ ಮತ್ತು ಕರ್ತವ್ಯ ಲೋಪ ಆರೋಪಗಳ ಕುರಿತು ಇಲಾಖಾ ವಿಚಾರಣೆ ಕೈಗೊಳ್ಳಲು ಶ್ರೀ ಕೆ. ಜಯರಾಂ, ಉಪನಿರ್ದೇಶಕರು, ಕೇಂದ್ರ ಕಛೇರಿ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಮತ್ತು ಈ ಇಲಾಖಾ ವಿಚಾರಣೆಯಲ್ಲಿ ಇಲಾಖಾ ಪರವಾಗಿ ಮಂಡಿಸಲು ಶ್ರೀ ಎಂ.ಎನ್. ಚಕಾರಿ, ಸಹಾಯಕ ನಿರ್ದೇಶಕರು, ಕೇಂದ್ರ ಕಛೇರಿ ಇವರನ್ನು ಮಂಡನಾಧಿಕಾರಿಯನ್ನಾಗಿ ಅನುಕ್ರಮವಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ ನಿಯಮಗಳು 1957ರ ನಿಯಮ 11 (5) (ಎ) ಮತ್ತು ನಿಯಮ 11(5) (ಸಿ)ರ ಅನ್ವಯ ನೇಮಿಸಲಾಗಿದೆ. ಹಾಗೂ ವಿಚಾರಣಾ ವರದಿಯನ್ನು ಎರಡು ತಿಂಗಳುಗಳ ಒಳಗಾಗಿ ಸಲ್ಲಿಸುವಂತೆ ಸೂಚಿಸಲಾಗಿದೆ.

ಈ ಪ್ರಕರಣಕ್ಕೆ ಸಂಬಂಧಿಸಿದ ಎಲ್ಲಾ ಮೂಲ ಕಡತಗಳನ್ನು/ ದಾಖಲಾತಿಗಳನ್ನು ತಕ್ಷಣ ಮಂಡನಾಧಿಕಾರಿಗಳಿಗೆ ಸಲ್ಲಿಸಿ, ಈ ನಿರ್ದೇಶನಾಲಯಕ್ಕೆ ಮಾಹಿತಿ ಒದಗಿಸುವಂತೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರಿಗೆ ಸೂಚಿಸಲಾಗಿದೆ.

ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರ
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ.

ಪಿ.ಆರ್.163

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಆಕುಕ 449 ಪಿಐಎಂ 2007, ಬೆಂಗಳೂರು, ದಿನಾಂಕ:21ನೇ ಏಪ್ರಿಲ್, 2008**

ಆಯುಷ್ ಇಲಾಖೆಯಲ್ಲಿ ದಿನಾಂಕ:01.01.2007 ರಲ್ಲಿರುವಂತೆ ಉಪ ನಿರ್ದೇಶಕರು (ಆಯುರ್ವೇದ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಇದೇ ಅಧಿಸೂಚನೆ ಸಮ ಸಂಖ್ಯೆ ದಿನಾಂಕ:19/24.09.2007ರಲ್ಲಿ ಪ್ರಕಟಿಸಿ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು. ಸದರಿ ಆಕ್ಷೇಪಣೆಗಳನ್ನು ಪರಿಶೀಲಿಸಿದ ನಂತರ ದಿನಾಂಕ:01.01.2007ರಲ್ಲಿರುವಂತೆ ಉಪ ನಿರ್ದೇಶಕರು (ಆಯುರ್ವೇದ) ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಈ ಅಧಿಸೂಚನೆಗೆ ಲಗತ್ತಿಸಲಾದ ಅನುಬಂಧದಲ್ಲಿರುವಂತೆ ಪ್ರಕಟಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

**ಅನುಬಂಧ**

**01.01.2007ರಲ್ಲಿರುವಂತೆ ಆಯುರ್ವೇದ ವೃಂದದ ಉಪ ನಿರ್ದೇಶಕರ ಅಂತಿಮ ಜೇಷ್ಠತಾ ಪಟ್ಟಿ**

| ಕ್ರ. ಸಂ. | ಹೆಸರು | ಹುಟ್ಟಿದ ದಿನಾಂಕ | ನೇರ ನೇಮಕಾತಿ/ ಮುಂಬಡ್ತಿ/ ಇತರೆ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ಮುಂಬಡ್ತಿಯ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|
| 1. | ಡಾ: ಕೆ.ಎಂ. ನಂಜಪ್ಪ | 10.12.49 | ಮುಂಬಡ್ತಿ | 16.09.71 | 16.12.2004 | 31.05.2000 ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 03 ಪಿಐಎಂ 2004, ದಿನಾಂಕ:26.05.2004 ರಂತೆ |
| 2. | ಡಾ: ಪಿ. ರಾಜೇಂದ್ರ | 03.07.50 | ಮುಂಬಡ್ತಿ | 16.09.71 | 18.05.2006 | 17.06.2002 ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 91 ಪಿಐಎಂ 2005, ದಿನಾಂಕ:01.10.2005 ರಂತೆ |
| 3. | ಡಾ: ಎ. ಹೇಮಾರೆಡ್ಡಿ | 05.11.49 | ಮುಂಬಡ್ತಿ | 31.07.87 | 15.05.2006 | 01.04.2004 ಇಲಾಖಾ ಮುಂಬಡ್ತಿ ಸಮಿತಿ ಸಭೆಯ ಸೂಚನೆ ಸಂಖ್ಯೆ: ಆಕುಕ 417 ಪಿಐಎಂ 2004, ದಿನಾಂಕ:07.12.2005 ರಂತೆ. |
| 4. | ಡಾ: ಅನಂತಭಟ್ಟ | 10.09.50 | ಮುಂಬಡ್ತಿ | 19.10.71 | 05.05.2006 | 01.04.2004 ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 91 ಪಿಐಎಂ 2005, ದಿನಾಂಕ:01.10.2005 ರಂತೆ. |
| 5. | ಡಾ: ಆರ್. ಸರಸ್ವತಿ | 22.07.62 | ಮುಂಬಡ್ತಿ | 07.08.91 | 11.05.2007 | 07.08.2004 ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 91 ಪಿಐಎಂ 2005, ದಿನಾಂಕ:01.10.2005 ರಂತೆ. |

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಭಾರತೀಯ ವೈದ್ಯ ಪದ್ಧತಿ)

ಪಿ.ಆರ್.518

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಆಕುಕ 252 ಎಂಎಸ್‌ಎಸ್ 2006, ಬೆಂಗಳೂರು, ದಿನಾಂಕ:9ನೇ ಏಪ್ರಿಲ್, 2008**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಅಪರ ನಿರ್ದೇಶಕರ ವೃಂದದ ಅಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2006 ರಲ್ಲಿದ್ದಂತೆ ಅಧಿಸೂಚನೆ ದಿನಾಂಕ:01.07.2006 ರಲ್ಲಿ ಪ್ರಕಟಪಡಿಸಿ ಆಕ್ಷೇಪಣೆಗಳನ್ನು ಕೋರಲಾಗಿತ್ತು. ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಯ ಮೇಲೆ ವೈದ್ಯಾಧಿಕಾರಿಗಳಿಂದ ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ. ಆದ್ದರಿಂದ ದಿನಾಂಕ:01.07.2006ರ ಸರ್ಕಾರಿ ಅಧಿಸೂಚನೆಯಲ್ಲಿ ಪ್ರಕಟಣೆಗೊಂಡಿರುವ ದಿನಾಂಕ:01.01.2006ರಲ್ಲಿದ್ದಂತೆ, ಅಪರ ನಿರ್ದೇಶಕರ ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಇದಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಪರಿಗಣಿಸಿ ಸಂಬಂಧಪಟ್ಟ ಎಲ್ಲರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 252 ಎಂಎಸ್‌ಎಸ್ 2006, ದಿನಾಂಕ:09.04.2008ಕ್ಕೆ ಅನುಬಂಧ**

**ದಿನಾಂಕ:01.01.2006 ರಲ್ಲಿದ್ದಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಅಪರ ನಿರ್ದೇಶಕರ ವೃಂದದ ಅಂತಿಮ ಜೇಷ್ಠತಾ ಪಟ್ಟಿ**

| ಕ್ರ. ಸಂ. | ವೈದ್ಯಾಧಿಕಾರಿಯ ಹೆಸರು | ನೇರ ನೇಮಕಾತಿ ಅಥವಾ ಮುಂಬಡ್ತಿ ಅಥವಾ ಇತರೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|---|
| 1. | ಡಾ: ಬೆನಿಟಾ ವಿ. ಡೇವಿಡ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 05.11.1948 | 12.06.1972 | 29.07.2005 | 29.07.2005 |
| 2. | ಡಾ:ಬಿ.ಕೆ. ಶಾಲಿನಿ | ಮುಂಬಡ್ತಿ | ಅನ್ವಯಿಸುವುದಿಲ್ಲ | 02.02.1948 | 07.01.1972 | 30.09.2005 | 30.09.2005 |
| 3. | ಡಾ:ಎಂ.ಜಿ.ಪ್ರಸಾದ್ | ಮುಂಬಡ್ತಿ | ಅನ್ವಯಿಸುವುದಿಲ್ಲ | 22.10.1948 | 15.04.1974 | 14.10.2005 | 14.10.2005 |

**ಪದ್ಮಾವತಿ**

ಪಿ.ಆರ್.511

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಜಲ ಸಂಪನ್ಮೂಲ ಇಲಾಖೆ**

**ತಿದ್ದುಪಡಿ**

**ಸಂಖ್ಯೆ: ಜಸಂಇ/ 27/ ಸೇಸಕಿ/ 2006, ಬೆಂಗಳೂರು, ದಿನಾಂಕ:22ನೇ ಫೆಬ್ರವರಿ, 2008**

**ವಿಷಯ:** ಶ್ರೀ ಮಾನಪ್ಪ, ಕಿರಿಯ ಇಂಜಿನಿಯರ್‌ರವರ ಜನ್ಮ ದಿನಾಂಕದ ತಿದ್ದುಪಡಿ ಕುರಿತು.

**ಉಲ್ಲೇಖ:** ಅಧಿಸೂಚನೆ ಸಂಖ್ಯೆ: ಡಿಪಿಎಆರ್/ 31/ ಎಸ್‌ಆರ್‌ಡಿ/ 2002, ದಿನಾಂಕ:18.10.2002.

ಉಲ್ಲೇಖಿತ ಅಧಿಸೂಚನೆಯಲ್ಲಿನ ಕ್ರಮಸಂಖ್ಯೆ:369 ರಲ್ಲಿ ಶ್ರೀ ಮಾನಪ್ಪ, ಕಿರಿಯ ಇಂಜಿನಿಯರ್, ಇವರ ಜನ್ಮ ದಿನಾಂಕವನ್ನು 01.06.1964 ಎಂದು ತಪ್ಪಾಗಿ ನಮೂದಿಸಿದ್ದು, ಸದರಿಯವರ ಎಸ್.ಎಸ್.ಎಲ್.ಸಿ. ಮೂಲ ಪ್ರಮಾಣ ಪತ್ರ ಹಾಗೂ ಮೂಲ ಸೇವಾ ಪುಸ್ತಕವನ್ನು ಪರಿಶೀಲಿಸಲಾಗಿದೆ. ಆದ್ದರಿಂದ ಉಲ್ಲೇಖಿತ ಅಧಿಸೂಚನೆಯಲ್ಲಿನ ಕ್ರಮ ಸಂ:369 ರಲ್ಲಿ ಇರುವ ಶ್ರೀ ಮಾನಪ್ಪ, ಕಿರಿಯ ಇಂಜಿನಿಯರ್ ಇವರ ಜನ್ಮ ದಿನಾಂಕವನ್ನು 01.06.1964 ಎಂಬುದರ ಬದಲಾಗಿ 01.06.1971 ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಸಿಆಸುಇ (ಸೇವಾ ನಿಯಮಗಳು–3) ಟಿಪ್ಪಣಿ ಸಂಖ್ಯೆ: ಸಿಆಸುಇ 150 ಸೇನಿಡಿ 2006 ದಿನಾಂಕ:15.12.2006, ಸಿಆಸುಇ 06 ಸೇನಿಡಿ 2008 ದಿನಾಂಕ:12.02.2008 ಹಾಗೂ ಆರ್ಥಿಕ ಇಲಾಖೆ (ಸೇ–3) ಟಿಪ್ಪಣಿ ಸಂಖ್ಯೆ: ಆಇ 255 ಸೇ–3 2006 ದಿನಾಂಕ:08.02.2007 ರನ್ವಯ ಈ ಅಧಿಸೂಚನೆಯನ್ನು ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಅಶೋಕ್ ಕುಮಾರ್**

ಪಿ.ಆರ್.247

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲಸಂಪನ್ಮೂಲ ಇಲಾಖೆ (ಸೇವೆಗಳು–ಬಿ).

**GOVERNMENT OF KARNATAKA,**
**DIRECTORATE OF ECONOMICS AND STATISTICS, BANGALORE-1**
**Consumer Price Index Numbers For Industrial Workers**

No. DES 25 PWX 2007 Month: November, 2007

State: Karnataka Base: 1987-88=100 Date : 07-02-2007

| Group/Sub-Group | | Bellary | Bhadra-vathi | Davan gere | Dan deli | Gul barga | Hari har | Hassan | Man dya | Man galore | Rai chur | Tum kur |
|---|---|---|---|---|---|---|---|---|---|---|---|---|
| 1 | | 2 | 3 | 4 | 5 | 6 | 7 | 8 | 9 | 10 | 11 | 12 |
| I. | **FOOD:**<br>(a) Cereals & Products | 409 | 443 | 468 | 414 | 464 | 411 | 410 | 429 | 350 | 400 | 462 |
| | (b) Pulses & Products | 398 | 428 | 456 | 464 | 416 | 414 | 422 | 464 | 403 | 405 | 436 |
| | (c) Oil & Fats | 310 | 303 | 299 | 325 | 296 | 302 | 276 | 298 | 248 | 317 | 283 |
| | (d) Meat, Fish & Eggs | 462 | 469 | 441 | 441 | 489 | 423 | 421 | 447 | 612 | 513 | 427 |
| | (e) Milk & Products | 357 | 303 | 352 | 334 | 340 | 397 | 279 | 366 | 322 | 339 | 304 |
| | (f) Condiments & Spices | 329 | 409 | 499 | 485 | 401 | 469 | 395 | 377 | 340 | 468 | 379 |
| | (g) Vegetables & Fruits | 436 | 368 | 591 | 490 | 421 | 429 | 398 | 562 | 376 | 339 | 517 |
| | (h) Other Food | 312 | 405 | 373 | 409 | 412 | 299 | 312 | 291 | 304 | 343 | 315 |
| | **FOOD GROUP INDEX** | **385** | **402** | **441** | **416** | **417** | **391** | **370** | **410** | **377** | **389** | **399** |
| II. | Pan, Supari, Tobacco & Intoxicants | 361 | 406 | 419 | 345 | 281 | 473 | 322 | 478 | 294 | 315 | 318 |
| III. | Fuel & Light | 399 | 330 | 318 | 456 | 321 | 351 | 361 | 333 | 291 | 516 | 300 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 263 | 258 | 255 | 377 | 265 | 266 | 368 | 381 | 244 | 476 | 215 |
| VI. | **MISCELLANEOUS:**<br>(a) Medical Care | 614 | 775 | 400 | 270 | 251 | 284 | 385 | 329 | 350 | 418 | 236 |
| | (b) Education, Recreation & Amusement | 360 | 422 | 494 | 236 | 401 | 478 | 348 | 303 | 531 | 499 | 415 |
| | (c) Transport & Communication | 419 | 433 | 358 | 655 | 595 | 424 | 400 | 566 | 608 | 390 | 444 |
| | (d) Personal Care & effects | 274 | 294 | 264 | 283 | 290 | 266 | 298 | 301 | 299 | 282 | 272 |
| | (e) Others<br>Miscellaneous Group | 353<br>390 | 369<br>404 | 309<br>345 | 450<br>346 | 271<br>334 | 273<br>330 | 275<br>329 | 290<br>314 | 252<br>396 | 485<br>412 | 257<br>306 |
| | **GENERAL INDEX** | **343** | **350** | **358** | **371** | **335** | **330** | **329** | **354** | **333** | **376** | **303** |
| | To convert to Base 1960 Multiply by Linking Factor. | **7.39** | **9.19** | **8.27** | **…** | **8.26** | **8.56** | **9.25** | **7.92** | **9.31** | **…** | **…** |

for Director.

**Government of India,**
**Ministry of Labour**
**Labour Bureau**
**No. 112/1(KTK)/2006-NCPI**

**CONSUMER PRICE INDEX NUMBERS FOR INDUSTRIAL WORKERS (BASE-2001=100)**

State: Karnataka Month: November, 2007

| Group/Sub-group/ Centre | Bangalore | Belgaum | Hubli Dharwar | Mercara | Mysore |
|---|---|---|---|---|---|
| 1 | 2 | 3 | 4 | 5 | 6 |
| **I A:FOOD:** | | | | | |
| (a) Cereals & Products | 135 | 154 | 141 | 118 | 129 |
| (b) Pulses & Products | 138 | 147 | 150 | 136 | 136 |
| (c) Oils & Fats | 187 | 193 | 172 | 157 | 150 |
| (d) Meat, Fish & Eggs | 150 | 162 | 149 | 134 | 151 |
| (e) Milk & Products | 128 | 121 | 111 | 125 | 132 |
| (f) Condiments & Spices | 145 | 141 | 147 | 140 | 156 |
| (g) Vegetables & Fruits | 143 | 140 | 151 | 135 | 139 |
| (h) Other Food | 137 | 129 | 134 | 125 | 126 |
| **I-A FOOD GROUP** | 140 | 146 | 141 | 128 | 135 |
| I-Pan, Supari, Tobacco & Intoxicants | 146 | 115 | 123 | 105 | 132 |
| II-Fuel & Light | 143 | 135 | 133 | 105 | 149 |
| III-Housing Index | 135 | 117 | 127 | 104 | 121 |
| IV-Clothing, Bedding & Footwear | 100 | 112 | 111 | 113 | 109 |
| **V-Miscellaneous:** | | | | | |
| (a) Medical Care | 141 | 140 | 134 | 129 | 130 |
| (b) Education, Recreation & Amusement | 135 | 136 | 138 | 129 | 113 |
| (c) Transport & Communication | 172 | 182 | 178 | 154 | 154 |
| (d) Personal Care & effects | 134 | 127 | 132 | 121 | 126 |
| (e) Others | 120 | 119 | 122 | 120 | 142 |
| Miscellaneous Group | 146 | 141 | 142 | 131 | 132 |
| **GENERAL INDEX** | **138** | **138** | **137** | **122** | **131** |

**HARITA SABHARWAL**
PR-183 DEPUTY DIRECTOR.

**GOVERNMENT OF KARNATAKA,**
**DIRECTORATE OF ECONOMICS AND STATISTICS, BANGALORE-1**
**Consumer Price Index Numbers For Industrial Workers**

No. DES 28 PWX 2008 Month: February, 2008
State: Karnataka Base: 1987-88=100 Date : 13-05-2008

| Group/Sub-Group | | Bellary | Bhadra-vathi | Davan gere | Dan deli | Gul barga | Hari har | Hassan | Man dya | Man galore | Rai chur | Tum kur |
|---|---|---|---|---|---|---|---|---|---|---|---|---|
| 1 | | 2 | 3 | 4 | 5 | 6 | 7 | 8 | 9 | 10 | 11 | 12 |
| I. | **FOOD:** (a) Cereals & Products | 424 | 457 | 478 | 469 | 478 | 434 | 410 | 450 | 374 | 397 | 467 |
| | (b) Pulses & Products | 395 | 425 | 462 | 439 | 365 | 417 | 418 | 480 | 388 | 420 | 440 |
| | (c) Oil & Fats | 314 | 310 | 312 | 327 | 293 | 321 | 306 | 303 | 253 | 333 | 282 |
| | (d) Meat, Fish & Eggs | 480 | 498 | 449 | 412 | 550 | 436 | 421 | 448 | 612 | 524 | 424 |

| 1 | | 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|---|---|
| | (e) Milk & Products | 360 | 303 | 403 | 385 | 353 | 414 | 305 | 416 | 356 | 406 | 335 |
| | (f) Condiments & Spices | 320 | 417 | 473 | 437 | 362 | 489 | 347 | 352 | 322 | 477 | 330 |
| | (g) Vegetables & Fruits | 475 | 345 | 614 | 453 | 344 | 403 | 373 | 492 | 322 | 297 | 488 |
| | (h) Other Food | 325 | 406 | 387 | 412 | 421 | 298 | 315 | 296 | 318 | 361 | 315 |
| | **FOOD GROUP INDEX** | **396** | **408** | **453** | **427** | **413** | **403** | **370** | **421** | **385** | **400** | **399** |
| II. | Pan, Supari, Tobacco & Intoxicants | 385 | 412 | 428 | 349 | 291 | 440 | 322 | 507 | 308 | 315 | 328 |
| III. | Fuel & Light | 410 | 327 | 317 | 457 | 321 | 349 | 357 | 334 | 291 | 481 | 300 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 259 | 258 | 267 | 379 | 352 | 266 | 368 | 381 | 242 | 516 | 215 |
| VI. | **MISCELLANEOUS:** (a) Medical Care | 621 | 785 | 406 | 270 | 251 | 278 | 385 | 422 | 350 | 418 | 236 |
| | (b) Education, Recreation & Amusement | 360 | 422 | 491 | 236 | 407 | 478 | 348 | 303 | 531 | 499 | 415 |
| | (c) Transport & Communication | 419 | 467 | 358 | 655 | 623 | 424 | 400 | 566 | 611 | 390 | 444 |
| | (d) Personal Care & effects | 299 | 296 | 263 | 284 | 286 | 264 | 298 | 301 | 316 | 284 | 272 |
| | (e) Others<br>Miscellaneous Group | 353<br>398 | 369<br>409 | 310<br>345 | 451<br>346 | 277<br>339 | 273<br>328 | 275<br>329 | 279<br>314 | 261<br>402 | 485<br>413 | 261<br>308 |
| | **GENERAL INDEX** | **352** | **354** | **365** | **377** | **343** | **335** | **329** | **360** | **339** | **384** | **304** |
| | To convert to Base 1960 Multiply by Linking Factor. | **7.39** | **9.19** | **8.27** | … | **8.26** | **8.56** | **9.25** | **7.92** | **9.31** | … | … |

for Director.

**Government of India,**
**Ministry of Labour**
**Labour Bureau**
**No. 112/1(KTK)/2006-NCPI**

**CONSUMER PRICE INDEX NUMBERS FOR INDUSTRIAL WORKERS (BASE-2001=100)**

State: Karnataka Month: February, 2008

| Group/Sub-group/ Centre | Bangalore | Belgaum | Hubli Dharwar | Mercara | Mysore |
|---|---|---|---|---|---|
| 1 | 2 | 3 | 4 | 5 | 6 |
| **I A:FOOD:** | | | | | |
| (a) Cereals & Products | 139 | 151 | 155 | 126 | 132 |
| (b) Pulses & Products | 133 | 131 | 142 | 138 | 140 |
| (c) Oils & Fats | 197 | 185 | 176 | 178 | 175 |
| (d) Meat, Fish & Eggs | 155 | 158 | 170 | 142 | 145 |
| (e) Milk & Products | 145 | 130 | 111 | 142 | 140 |

| 1 | 2 | 3 | 4 | 5 | 6 |
|---|---|---|---|---|---|
| (f) Condiments & Spices | 134 | 114 | 145 | 129 | 141 |
| (g) Vegetables & Fruits | 132 | 135 | 141 | 131 | 130 |
| (h) Other Food | 143 | 131 | 133 | 129 | 139 |
| **I-A FOOD GROUP** | 143 | 142 | 145 | 133 | 138 |
| I-Pan, Supari, Tobacco & Intoxicants | 148 | 115 | 129 | 108 | 133 |
| II-Fuel & Light | 146 | 132 | 137 | 105 | 149 |
| III-Housing Index | 141 | 119 | 131 | 104 | 125 |
| IV-Clothing, Bedding & Footwear | 101 | 116 | 115 | 113 | 116 |
| **V-Miscellaneous:** | | | | | |
| (a) Medical Care | 153 | 146 | 136 | 151 | 135 |
| (b) Education, Recreation & Amusement | 138 | 136 | 143 | 130 | 113 |
| (c) Transport & Communication | 174 | 183 | 179 | 157 | 156 |
| (d) Personal Care & effects | 138 | 129 | 133 | 122 | 126 |
| (e) Others | 127 | 119 | 122 | 124 | 154 |
| Miscellaneous Group | 150 | 143 | 144 | 134 | 134 |
| **GENERAL INDEX** | **142** | **137** | **141** | **125** | **135** |

**HARITA SABHARWAL**
PR-545 DEPUTY DIRECTOR.

## ವಸತಿ ಇಲಾಖೆ
## ತಿದ್ದುಪಡಿ
### ಸಂಖ್ಯೆ: ವಇ 38 ಕೊಮಂಇ 2006, ಬೆಂಗಳೂರು, ದಿನಾಂಕ:1ನೇ ಮಾರ್ಚ್, 2008

**ವಿಷಯ:** ಬೆಂಗಳೂರು ನಗರ ವ್ಯಾಪ್ತಿಯಲ್ಲಿರುವ ಕುಂಟೆಸೀನಪ್ಪ ಗಾರ್ಡನ್ ಕೊಳಚೆ ಪ್ರದೇಶದ ಭೂಮಿಯನ್ನು ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದಂತೆ ಭೂಸ್ವಾಧೀನದ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ಸಂಖ್ಯೆ: ವಇ 38 ಕೊಮಂಇ 07, ದಿನಾಂಕ:09.11.2007.

ಉಲ್ಲೇಖಿತ ಅಧಿಸೂಚನೆ ಸಂಖ್ಯೆ: ವಇ 38 ಕೊಮಂಇ 2007, ದಿನಾಂಕ:09.11.2007 ಎಂದು ತಪ್ಪಾಗಿ ನಮೂದಾಗಿದ್ದು, ದಯವಿಟ್ಟು ಇದನ್ನು ಅಧಿಸೂಚನೆ ಸಂಖ್ಯೆ: ವಇ 38 ಕೊಮಂಇ 06, ದಿನಾಂಕ:09.11.2007 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಉಳಿದಂತೆ ಅಧಿಸೂಚನೆಯಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್.273 **ಜಿ.ಆರ್. ನಾಗರಾಜ**
ಪೀಠಾಧಿಕಾರಿ–4, ವಸತಿ ಇಲಾಖೆ.

## ಆರ್ಥಿಕ ಇಲಾಖೆ
## ಅಧಿಕೃತ ಜ್ಞಾಪನ
### ಸಂಖ್ಯೆ: ಆಇ 39 ಸಉಲಾ 2008, ಬೆಂಗಳೂರು, ದಿನಾಂಕ:9ನೇ ಏಪ್ರಿಲ್, 2008

**ವಿಷಯ:** ದಿನಾಂಕ:01.01.2008 ರಲ್ಲಿದ್ದಂತೆ ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯಲ್ಲಿನ ಉಪ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ ಪ್ರಚುರಪಡಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಆಇ 51 ಸಉಲಾ 2006, ದಿನಾಂಕ:13.09.2006.

ಬಂಡವಾಳ ಹೂಡಿಕೆ ಮಾಹಿತಿ ನಿರ್ವಹಣೆ ಹಾಗೂ ವಸೂಲಾತಿ, ಸಣ್ಣ ಉಳಿತಾಯ ಮತ್ತು ರಾಜ್ಯ ಲಾಟರಿ ಇಲಾಖೆಯಲ್ಲಿನ ಉಪ ನಿರ್ದೇಶಕರ ವೃಂದದ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2008ರಲ್ಲಿದ್ದಂತೆ ಈ ಕೆಳಕಂಡಂತೆ ಪ್ರಕಟಿಸಲಾಗಿದೆ:

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ಸರ್ಕಾರದ ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯ ದಿನಾಂಕ | ಅರ್ಹತಾ ದಿನಾಂಕ ಸರ್ಕಾರ |
|---|---|---|---|---|---|
| 1. | ಶ್ರೀ ಆರ್. ಬಸವಣ್ಣ (*) | 10.12.1949 | 01.06.1977 | 06.07.1995 | 04.07.1995 |
| 2. | ಶ್ರೀ ಓ. ಬೊಮ್ಮಣ್ಣ | 08.11.1953 | 01.10.1981 | 11.08.1995 | 04.07.1995 |
| 3. | ಶ್ರೀ ಎ.ಆರ್. ಸತ್ಯನಾರಾಯಣ | 04.09.1952 | 01.10.1981 | 14.06.2006 | 01.06.2006 |

(*) (ಸದರಿ ಅಧಿಕಾರಿಯವರು 31.12.2007ರಂದು ವಯೋ ನಿವೃತ್ತಿ ಹೊಂದಿರುತ್ತಾರೆ.)

ಈ ಜೇಷ್ಠತಾ ಪಟ್ಟಿಯ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದರೆ ಅಂತಹ ಅಧಿಕಾರಿಗಳು ಈ ಅಧಿಕೃತ ಜ್ಞಾಪನ ಹೊರಡಿಸಿದ ದಿನಾಂಕದಿಂದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆಗಳನ್ನು ಇಲಾಖಾ ನಿರ್ದೇಶಕರ ಮುಖಾಂತರ ಸರ್ಕಾರಕ್ಕೆ ಕಳುಹಿಸಿ ಕೊಡತಕ್ಕದ್ದು. ಈ ಅವಧಿಯೊಳಗೆ ಯಾವುದೇ ಆಕ್ಷೇಪಣೆಗಳು ಬಾರದಿದ್ದಲ್ಲಿ ಈ ಜೇಷ್ಠತಾ ಪಟ್ಟಿಯನ್ನು ಅಂತಿಮಗೊಳಿಸಿ ಪ್ರಕಟಿಸಲು ಕ್ರಮ ತೆಗೆದುಕೊಳ್ಳಲಾಗುವುದು.

**ಎನ್. ಶ್ರೀನಿವಾಸ ಮೂರ್ತಿ**
ಪಿ.ಆರ್.484 ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು).

**ಕಾರ್ಮಿಕ ಇಲಾಖೆ**
**ಅಧಿಕೃತ ಜ್ಞಾಪನ**
**ಸಂಖ್ಯೆ: ಕಾಇ 05 ಇಟಿಎಕ್ಸ್ 2007, ಬೆಂಗಳೂರು, ದಿನಾಂಕ:19ನೇ ಮಾರ್ಚ್, 2008**

ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿಭಾಗದ ಉಪ ನಿರ್ದೇಶಕರು (ಉದ್ಯೋಗ) ವೃಂದದ ಅಧಿಕಾರಿಗಳ ದಿನಾಂಕ:01.01.2007ರಂದು ಇದ್ದಂತೆ ಕರಡು ಜೇಷ್ಠತಾ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ: ಕಾಇ 05 ಇಟಿಎಕ್ಸ್ 2007 ದಿನಾಂಕ:29.06.2007ರಲ್ಲಿ ಪ್ರಕಟಿಸಲಾಗಿತ್ತು. ತತ್ಸಂಬಂಧದಲ್ಲಿ ಈ ವರೆವಿಗೂ ಯಾವುದೇ ಆಕ್ಷೇಪಣೆಗಳು ಸ್ವೀಕರಿಸಲ್ಪಟ್ಟಿರದೇ ಇರುವುದರಿಂದ ಅಂತಿಮ ಜೇಷ್ಠತಾ ಪಟ್ಟಿಯನ್ನು ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

**ಉಪನಿರ್ದೇಶಕರು (ಉದ್ಯೋಗ) ವೃಂದದ ದಿನಾಂಕ:01.01.2007ರಂದು ಇದ್ದಂತೆ ಕರಡು ಜೇಷ್ಠತಾ ಪಟ್ಟಿ**

| ಕ್ರ. ಸಂ. | ಹಿಂದಿನ ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ | ಹೆಸರು ಪೋಷಕ ವೃಂದದ ಜೇಷ್ಠತಾ ಸಂಖ್ಯೆ | ನೇರ ನೇಮಕಾತಿ/ ಮುಂಬಡ್ತಿ | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ/ ನೇಮಕಾತಿ ಹೊಂದಿದ ದಿನಾಂಕ | ನೇಮಕಾತಿ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| | | ಶ್ರೀ/ ಶ್ರೀಮತಿ | | | | | | |
| ಉಪ ನಿರ್ದೇಶಕರು (ವೇತನ ಶ್ರೇಣಿ ರೂ.9580–260–10880–320–13140–380–14200) | | | | | | | | |
| 1. | | – ಖಾಲಿ– | – | – | – | – | – | – |
| 2. | | – ಖಾಲಿ– | – | – | – | – | – | – |

**ಅಬ್ದುಲ್ ರಹಮಾನ್**
ಪಿ.ಆರ್.339 ಪೀಠಾಧಿಕಾರಿ,
ಕಾರ್ಮಿಕ ಇಲಾಖೆ, (ಉದ್ಯೋಗ ಮತ್ತು ತರಬೇತಿ)

**ಕಾರ್ಮಿಕ ಇಲಾಖೆ**
**ಅಧಿಕೃತ ಜ್ಞಾಪನ**
**ಸಂಖ್ಯೆ: ಕಾಇ 19 ಇಟಿಎಕ್ಸ್ 2007, ಬೆಂಗಳೂರು, ದಿನಾಂಕ:19ನೇ ಮಾರ್ಚ್, 2008**

ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿಭಾಗದ ಜಂಟಿ ನಿರ್ದೇಶಕರು (ಉದ್ಯೋಗ) ವೃಂದದ ಅಧಿಕಾರಿಗಳ ದಿನಾಂಕ:01.01.2007ರಂದು ಇದ್ದಂತೆ ಕರಡು ಜೇಷ್ಠತಾ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ: ಕಾಇ 19 ಇಟಿಎಕ್ಸ್ 2007 ದಿನಾಂಕ:29.06.2007ರಲ್ಲಿ ಪ್ರಕಟಿಸಲಾಗಿತ್ತು. ತತ್ಸಂಬಂಧದಲ್ಲಿ ಈ ವರೆವಿಗೂ ಯಾವುದೇ ಆಕ್ಷೇಪಣೆಗಳು ಸ್ವೀಕರಿಸಲ್ಪಟ್ಟಿಲ್ಲದೇ ಇರುವುದರಿಂದ ಅಂತಿಮ ಜೇಷ್ಠತಾ ಪಟ್ಟಿಯನ್ನು ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

**ಜಂಟಿನಿರ್ದೇಶಕರು (ಉದ್ಯೋಗ) ವೃಂದದ ದಿನಾಂಕ:01.01.2007ರಂದು ಇದ್ದಂತೆ ಕರಡು ಜೇಷ್ಠತಾ ಪಟ್ಟಿ**

| ಕ್ರ. ಸಂ. | ಹಿಂದಿನ ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ | ಹೆಸರು ಪೋಷಕ ವೃಂದದ ಜೇಷ್ಠತಾ ಸಂಖ್ಯೆ | ನೇರ ನೇಮಕಾತಿ/ ಮುಂಬಡ್ತಿ | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ/ ನೇಮಕಾತಿ ಹೊಂದಿದ ದಿನಾಂಕ | ನೇಮಕಾತಿ ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| | | ಶ್ರೀ/ ಶ್ರೀಮತಿ | | | | | | |
| | | – ಖಾಲಿ– | – | – | – | – | – | – |

**ಅಬ್ದುಲ್ ರಹಮಾನ್**
ಪಿ.ಆರ್.340 ಪೀಠಾಧಿಕಾರಿ,
ಕಾರ್ಮಿಕ ಇಲಾಖೆ, (ಉದ್ಯೋಗ ಮತ್ತು ತರಬೇತಿ)

## ಸಮಾಜ ಕಲ್ಯಾಣ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಸಕಇ 137 ಬಿಇಟಿ 2008, ಬೆಂಗಳೂರು, ದಿನಾಂಕ:25ನೇ ಏಪ್ರಿಲ್, 2008**

ಶ್ರೀ ವಿರೂಪಾಕ್ಷ, ಜಿಲ್ಲಾ ಹಿಂದುಳಿದ ವರ್ಗಗಳ ಅಧಿಕಾರಿ, ಬೀದರ್ ಇವರು ಸಿಂಧುತ್ವ ಪ್ರಮಾಣ ಪತ್ರ ನೀಡುವ ವಿಷಯಗಳ ಬಗ್ಗೆ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿಯಿಂದ ಕೆಲಸ ನಿರ್ವಹಿಸುತ್ತಿದ್ದಾರೆ ಇತ್ಯಾದಿ ಆರೋಪಗಳಿದ್ದು, ಸದರಿ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 10(1)(ಎ)ರ ಅಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಇವರನ್ನು ಅಮಾನತ್ತಿನಲ್ಲಿರಿಸಿ ಆದೇಶಿಸಲಾಗಿದೆ.

ನಿರ್ದೇಶಕರು, ಹಿಂದುಳಿದ ವರ್ಗಗಳ ಇಲಾಖೆ, ಬೆಂಗಳೂರು ರವರು ಕೂಡಲೇ ಇವರ ಜಾಗಕ್ಕೆ ಪ್ರಭಾರ ವ್ಯವಸ್ಥೆ ಮಾಡತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ವೇಣುಗೋಪಾಲ್**
ಸರ್ಕಾರದ ಉಪ ಕಾರ್ಯದರ್ಶಿ–1,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್.519

## ಕೃಷಿ ಮಾರಾಟ ಇಲಾಖೆ

### ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 11ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು

### ಅಧಿಸೂಚನೆ

**ಸಂಖ್ಯೆ: ಕೃಮಾಇ/26/ಚುನಾವ/2005, ಬೆಂಗಳೂರು, ದಿನಾಂಕ:29ನೇ ಏಪ್ರಿಲ್, 2008**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 11ರ ಉಪ ಪ್ರಕರಣ (1) (viii)ರ ಪ್ರಕಾರ ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಕೃಮಾಇ/26/ ಚುನಾವ/ 2005, ದಿನಾಂಕ:07.01.2006ರಲ್ಲಿ ಚಳ್ಳಕೆರೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಉಪ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರನ್ನು ಇಲಾಖಾ ಪ್ರತಿನಿಧಿಯನ್ನಾಗಿ ನೇಮಿಸಲಾಗಿರುತ್ತದೆ. ಪ್ರಸ್ತುತ ಆಡಳಿತಾತ್ಮಕ ಹಿತದೃಷ್ಟಿಯಿಂದ ಸದರಿ ಅಧಿಸೂಚನೆಯನ್ನು ರದ್ದುಗೊಳಿಸುತ್ತಾ, ಮೇಲ್ಕಂಡ ಕಾಯ್ದೆಯ ಕಲಂ 11(1) (viii) ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಹೆಚ್.ಆರ್. ಶ್ರೀನಿವಾಸ ಆದ ನಾನು, ಚಳ್ಳಕೆರೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡ ಅಧಿಕಾರಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಇಲಾಖಾ ಪ್ರತಿನಿಧಿ ಸದಸ್ಯರನ್ನಾಗಿ ನಾಮಕರಣ ಮಾಡಿದ್ದೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರನ್ನಾಗಿ ನಾಮಕರಣ ಮಾಡಲಾಗಿರುವ ಅಧಿಕಾರಿ |
|---|---|---|---|
| 1. | ಚಿತ್ರದುರ್ಗ | ಚಳ್ಳಕೆರೆ | ಕಾರ್ಯದರ್ಶಿ,<br>ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಳ್ಳಾರಿ. |

**ಹೆಚ್.ಆರ್. ಶ್ರೀನಿವಾಸ್**
ನಿರ್ದೇಶಕರು.

ಪಿ.ಆರ್.520

## ಶಿಕ್ಷಣ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಇಡಿ 172 ಡಿಪಿಐ 2008, ಬೆಂಗಳೂರು, ದಿನಾಂಕ:14ನೇ ಮೇ, 2008**

**ವಿಷಯ:** ಪದವಿ ಪೂರ್ವ ಶಿಕ್ಷಣ ಇಲಾಖೆಯ, ಶಾಖಾಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2008 ರಲ್ಲಿದ್ದಂತೆ ಪ್ರಕಟಿಸುವ ಬಗ್ಗೆ.

ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಶಾಖಾಧಿಕಾರಿಗಳಾಗಿ ಕಾರ್ಯ ನಿರ್ವಹಿಸುತ್ತಿರುವವರ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2008 ರಂದು ಇದ್ದಂತೆ ತಯಾರಿಸಿ ಇದರೊಂದಿಗೆ ಅನುಬಂಧದಲ್ಲಿರಿಸಲಾಗಿದೆ. ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿ ನಮೂದಿಸಿರುವ ಅಧಿಕಾರಿಗಳ ಜನ್ಮ ದಿನಾಂಕ, ಸೇವೆಗೆ ಸೇರಿದ ದಿನಾಂಕ, ಬಡ್ತಿ ಹೊಂದಿದ ದಿನಾಂಕ ಮತ್ತು ಇತರೆ ಅಂಶಗಳಿಂದ ಭಾದಿತರಾಗಬಹುದಾದ ಅಧಿಕಾರಿಗಳು ಈ ಅಧಿಸೂಚನೆಯ ದಿನಾಂಕದಿಂದ 15 ದಿವಸಗಳ ಅವಧಿಯೊಳಗೆ ಆಕ್ಷೇಪಣೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ, 6ನೇ ಮಹಡಿ, ಬಹುಮಹಡಿಗಳ ಕಟ್ಟಡ, ಬೆಂಗಳೂರು, ಇವರಿಗೆ ಸಲ್ಲಿಸುವಂತೆ ಕೋರಿದೆ. ನಿಗದಿತ ಸಮಯಾವಕಾಶದ ನಂತರ ಸಲ್ಲಿಸಲಾಗುವ/ ಸ್ವೀಕರಿಸಲಾಗುವ ಆಕ್ಷೇಪಣೆಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು–1,2)

ಅನುಬಂಧ

(ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 172 ಡಿಪಿಐ 2008)

ಪದವಿ ಪೂರ್ವ ಶಿಕ್ಷಣ ಇಲಾಖೆಯ ಶಾಖಾಧಿಕಾರಿ ವೃಂದದವರ ತಾತ್ಕಾಲಿಕ ಜೇಷ್ಠತಾ ಪಟ್ಟಿ ದಿನಾಂಕ:01.01.2008ರಲ್ಲಿದ್ದಂತೆ

| ಕ್ರಮ ಸಂಖ್ಯೆ | ಅಧೀಕ್ಷಕರ ಹುದ್ದೆಯ ಜೇಷ್ಠತಾ ಸಂಖ್ಯೆ | ಅಧಿಕಾರಿಗಳ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಅಧೀಕ್ಷಕರಾಗಿ ಬಡ್ತಿ ಹೊಂದಿದ ದಿನಾಂಕ | ಶಾಖಾಧಿಕಾರಿಯಾಗಿ ಬಡ್ತಿ ಹೊಂದಿದ ದಿನಾಂಕ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | 07 | ತಮೋಜಿರಾವ್ ಎನ್. | 05.06.1951 | 25.03.1976 | 05.09.1986 | 30.06.2006 |
| 2. | 09 | ಷಣ್ಮುಕಪ್ಪ ಸಿ.ಐ. | 07.01.1948 | 08.10.1975 | 21.05.1986 | 30.06.2006 |
| 3. | 10 | ರಾಜಣ್ಣ ಸಿ.ಎಂ. | 25.05.1949 | 12.07.1978 | 01.01.1987 | 01.08.2006 |
| 4. | 11 | ಮೊಟಗಿ ಎಸ್.ಎಸ್. | 01.06.1956 | 26.02.1977 | 08.09.1988 | 30.06.2006 |
| 5. | 14 | ಶ್ರೀನಿವಾಸ್ ಕೆ.ಎಸ್. | 01.11.1954 | 12.07.1976 | 15.06.1992 | 01.07.2006 |
| 6. | 15 | ರಾಮಮೂರ್ತಿ ವಿ.ಎಸ್. | 29.08.1953 | 11.06.1973 | 03.06.1992 | 29.08.2007 |
| 7. | 16 | ಕಂಬಯ್ಯ ಹೆಚ್. | 05.09.1953 | 24.02.1982 | 18.01.1995 | 29.08.2007 |

ಎಂ.ಎಂ. ಹಿರೇಮಠ

ಪಿ.ಆರ್.575

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು–1,2)

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ಸಂಖ್ಯೆ: ಎಲ್.ಆರ್.ಎಫ್ (ಎನ್) ಸಿ.ಆರ್.:10/06–07, ಬೆಂಗಳೂರು, ದಿನಾಂಕ:4ನೇ ಜನವರಿ, 2008**

**ವಿಷಯ:** ನಾರ್ತ್ ಬೆಂಗಳೂರು ಎಜುಕೇಷನಲ್ ಟ್ರಸ್ಟ್, ಕಮ್ಮಗೊಂಡನಹಳ್ಳಿ, ಬೆಂಗಳೂರು 15 ರವರು ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಕಮ್ಮಗೊಂಡನಹಳ್ಳಿ ಗ್ರಾಮದ ಸ.ನಂ.45/3 ರಲ್ಲಿ 0–15 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ನಾರ್ತ್ ಬೆಂಗಳೂರು ಎಜುಕೇಷನಲ್ ಟ್ರಸ್ಟ್, ಕಮ್ಮಗೊಂಡನಹಳ್ಳಿ, ಬೆಂಗಳೂರು 15 ರವರು ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಕಮ್ಮಗೊಂಡನಹಳ್ಳಿ ಗ್ರಾಮದ ಸ.ನಂ.45/3 ರಲ್ಲಿ 0–15 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ–15ಎ ಮತ್ತು ನಮೂನೆ–15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರದ ನಂ.ಎಲ್.ಆರ್.ಎಫ್. (1) ಸಿ.ಆರ್: 210/06–07, ದಿನಾಂಕ:03.11.2007ರಲ್ಲಿ ಪ್ರಸ್ತಾಪಿತ ಕಮ್ಮಗೊಂಡನಹಳ್ಳಿ ಗ್ರಾಮದ ಸ.ನಂ.45/3 ರಲ್ಲಿ 0–15 ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I)(II) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ನೋಂದಣಿ ಸಂಖ್ಯೆಯ: 350/06–07, ದಿನಾಂಕ:14.09.2006ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್.) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I) (II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ ತಾಲ್ಲೂಕು, ಯಶವಂತಪುರ ಹೋಬಳಿ, ಕಮ್ಮಗೊಂಡನಹಳ್ಳಿ ಗ್ರಾಮದ ಸ.ನಂ.45/3 ರಲ್ಲಿ 0–15 ಗುಂಟೆ ಜಮೀನನ್ನು ನಾರ್ತ್ ಬೆಂಗಳೂರು ಎಜುಕೇಷನಲ್ ಟ್ರಸ್ಟ್, ಕಮ್ಮಗೊಂಡನಹಳ್ಳಿ, ಬೆಂಗಳೂರು 15 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I) (II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ.ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ:23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡಾ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3) ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.

5) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ., ಒ.ಡಿ.ಪಿ. ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.

6) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.

7) ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.149

**ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರ ನಡವಳಿಕೆಗಳು**

**ವಿಷಯ:** ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಗುಂಜೂರು ಗ್ರಾಮದ ಸ.ನಂ.280 ಮತ್ತು 281 ರಲ್ಲಿನ 2–23 ಎಕರೆ/ ಗುಂಟೆ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಉಲ್ಲೇಖ:** 1) ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕುರವರ ಪತ್ರಸಂಖ್ಯೆ:ಎಲ್.ಎನ್.ಡಿ: ಸಿ.ಆರ್:361/06–07 ದಿನಾಂಕ:27.06.2007.

2) ಸರ್ಕಾರದ ಪತ್ರ ಸಂಖ್ಯೆ: ಆರ್.ಡಿ:40 ಎಲ್‌ಜಿಪಿ 2007, ದಿನಾಂಕ:17.10.2007.

**ಪ್ರಸ್ತಾವನೆ:**

ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಗುಂಜೂರು ಗ್ರಾಮದ ಸ.ನಂ.280 ರಲ್ಲಿ 9–07 ಎಕರೆ/ ಗುಂಟೆ ಸರ್ಕಾರಿ ಮುಫತ್‌ಕಾವಲ್ ಜಮೀನಿದ್ದು, ಬಗರ್‌ಹುಕುಂ ಸಾಗುವಳಿದಾರರು ಮಂಜೂರಾತಿ ಕೋರಿ ಸಲ್ಲಿಸಿದ್ದ ಅರ್ಜಿಗಳು ಬೆಂಗಳೂರು ಮಹಾನಗರ ಪಾಲಿಕೆ ಸರಹದ್ದಿನಿಂದ 18 ಕಿ.ಮೀ. ವ್ಯಾಪ್ತಿಯೊಳಗೆ ಬರುವುದರಿಂದ ಮಂಜೂರಾಗಿರುವುದಿಲ್ಲವೆಂದು, ಹಾಗೂ ಇದೇ ಗ್ರಾಮದ ಸ.ನಂ.281ರಲ್ಲಿ 12–29 ಎಕರೆ/ ಗುಂಟೆ ಜಮೀನಿದ್ದು, ಸರ್ಕಾರದ ಗೋಮಾಳದ ಜಮೀನಾಗಿರುತ್ತದೆಂದು, ಬೆಂಗಳೂರು ಮಹಾನಗರ ಪಾಲಿಕೆ ಸರಹದ್ದಿನಿಂದ 18 ಕಿ.ಮೀ. ವ್ಯಾಪ್ತಿಯೊಳಗೆ ಬರುವುದರಿಂದ ಮಂಜೂರಾಗಿರುವುದಿಲ್ಲವೆಂದು, ಒತ್ತುವರಿಯನ್ನು ಖುಲ್ಲಾಪಡಿಸಿರುವುದಾಗಿ, ಹಾಲಿ ಜಮೀನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಬರುತ್ತಿದ್ದು, ಗುಂಜೂರು ಗ್ರಾಮವು ದೊಡ್ಡ ಗ್ರಾಮವಾಗಿದ್ದು, ಹಾಲಿ ಇರುವ ಸ್ಮಶಾನದ ಜಮೀನು ಕಡಿಮೆ ಇರುವುದರಿಂದ, ಸ.ನಂ.280ರಲ್ಲಿ 8–04 ಎಕರೆ/ ಗುಂಟೆ ಜಮೀನನ್ನು ಗುಂಜೂರು ಗ್ರಾಮಕ್ಕೆ ಹಿಂದೂಗಳ ಸ್ಮಶಾನಕ್ಕಾಗಿ ಕಾಯ್ದಿರಿಸಲು ಉಲ್ಲೇಖ (1)ರ ಪತ್ರದಲ್ಲಿ ತಹಶೀಲ್ದಾರ್‌ರವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ತಹಶೀಲ್ದಾರ್‌ರವರ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಗುಂಜೂರು ಗ್ರಾಮದ ಸ.ನಂ.280ರಲ್ಲಿ 8–04 ಎಕರೆ/ ಗುಂಟೆ ಮತ್ತು ಸ.ನಂ.281 ರಲ್ಲಿ 9–19 ಎಕರೆ/ ಗುಂಟೆ ಒಟ್ಟು 17–23 ಎಕರೆ/ ಗುಂಟೆ ಜಮೀನಿನ ಪೈಕಿ 15–00 ಎಕರೆ ಜಮೀನು ನೆಫ್ರೋ ಯುರಾಲಜಿ ಸಂಸ್ಥೆಗೆ ಮಂಜೂರು ಮಾಡಲು ಹಾಗೂ ಉಳಿಯುವ 2–23 ಎಕರೆ/ ಗುಂಟೆ ಜಮೀನನ್ನು ಸಾರ್ವಜನಿಕ ಸ್ಮಶಾನಕ್ಕಾಗಿ ಕಾಯ್ದಿರಿಸಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿತ್ತು.

ಉಲ್ಲೇಖ (2)ರ ಸರ್ಕಾರದ ಪತ್ರದಲ್ಲಿ 15–00 ಎಕರೆ ಜಮೀನನ್ನು ನೆಫ್ರೋ ಯುರಾಲಜಿ ಸಂಸ್ಥೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು 1969ರ ನಿಯಮ 20(1)(ಸಿ) ರನ್ವಯ ಶೇ.50 ರಷ್ಟು ಮಾರುಕಟ್ಟೆ ದರವನ್ನು ವಿಧಿಸಿ ಮಂಜೂರು ಮಾಡಲು ಸರ್ಕಾರ ಪೂರ್ವಾನುಮೋದನೆ ನೀಡಿದೆ ಹಾಗೂ ಸದರಿ ಸರ್ವೆ ನಂಬರ್‌ನಲ್ಲಿ ಉಳಿದಿರುವ 2–23 ಎಕರೆ/ ಗುಂಟೆ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 71 ರಂತೆ ಸ್ಮಶಾನಕ್ಕಾಗಿ ಕಾಯ್ದಿರಿಸಲು ಸರ್ಕಾರವು ಪೂರ್ವಾನುಮೋದನೆಯನ್ನು ನೀಡಿರುತ್ತದೆ. ಅಂತೆಯೇ ಸರ್ಕಾರದ ಪೂರ್ವಾನುಮೋದನೆಯಂತೆ ಸ್ಮಶಾನಕ್ಕಾಗಿ ಜಮೀನನ್ನು ಕಾಯ್ದಿರಿಸಲು ಈ ಕೆಳಕಂಡಂತೆ ಕಾಯ್ದಿರಿಸಲಾಗಿದೆ.

**ಆದೇಶ**

**ನಂ.ಎಲ್‌ಎನ್‌ಡಿ (ಪೂ) ಸಿಆರ್: 267/ 2006–07, ದಿನಾಂಕ:6ನೇ ಫೆಬ್ರವರಿ, 2008**

ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಗುಂಜೂರು ಗ್ರಾಮದ ಸ.ನಂ.280 ರಲ್ಲಿನ 8–04 ಎಕರೆ/ ಗುಂಟೆ ಮತ್ತು ಸ.ನಂ.281 ರಲ್ಲಿನ 9–19 ಎಕರೆ/ ಗುಂಟೆ ಒಟ್ಟು 17–23 ಎಕರೆ/ ಗುಂಟೆ ಜಮೀನುಗಳು ಕ್ರಮವಾಗಿ **ಸರ್ಕಾರಿ ಮುಫತ್ತು ಕಾವಲು** ಎಂದು ವರ್ಗೀಕೃತಗೊಂಡಿದೆ. ಈ ಜಮೀನಿನ ಪೈಕಿ 15–00 ಎಕರೆ ಜಮೀನನ್ನು ನೆಫ್ರೋ ಯುರಾಲಜಿ ಸಂಸ್ಥೆಗೆ ಮಂಜೂರು ಮಾಡಿ, ಉಳಿದಿರುವ 2–23 ಎಕರೆ/ ಗುಂಟೆ ಜಮೀನನ್ನು ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ ಉಲ್ಲೇಖ (2)ರ ಸರ್ಕಾರದ ಪೂರ್ವಾನುಮೋದನೆಯಂತೆ ಹಾಗೂ ಉಲ್ಲೇಖ (1)ರ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕುರವರ ವರದಿಯಂತೆ ಗುಂಜೂರು ಗ್ರಾಮದ ಸ.ನಂ.280 ಮತ್ತು 281 ರಲ್ಲಿನ 2–23 ಎಕರೆ/ ಗುಂಟೆ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1964 ಕಲಂ 71ರಡಿ ಸಾರ್ವಜನಿಕ ಸ್ಮಶಾನಕ್ಕಾಗಿ ಕಾಯ್ದಿರಿಸಿ ಆದೇಶಿಸಿದೆ.

ವಿಶೇಷ ಜಿಲ್ಲಾಧಿಕಾರಿಗಳು,
ಪಿ.ಆರ್.181 ಬೆಂಗಳೂರು ಜಿಲ್ಲೆ, ಬೆಂಗಳೂರು.

**ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರ ನಡವಳಿಕೆಗಳು**

**ವಿಷಯ:** ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರಂ ಹೋಬಳಿ, ಕೌದೇನಹಳ್ಳಿ ಗ್ರಾಮದ ಸ.ನಂ.95/3 ರಲ್ಲಿನ 0–05 ಗುಂಟೆ ಜಮೀನನ್ನು ಶಿಕ್ಷಣ ಇಲಾಖೆಗೆ ಕಾಯ್ದಿರಿಸಿ, ವರ್ಗಾಯಿಸುವ ಬಗ್ಗೆ.

**ಉಲ್ಲೇಖ:** 1) ಕ್ಷೇತ್ರ ಶಿಕ್ಷಣಾಧಿಕಾರಿಗಳು, ಬೆಂಗಳೂರು ದಕ್ಷಿಣ ವಲಯ–4, ಕೆ.ಆರ್.ಪುರಂ ಬೆಂಗಳೂರು ರವರ ಪತ್ರಸಂಖ್ಯೆ: ಸಿ1:ಕಟ್ಟಡ–4/ 06–07, ದಿನಾಂಕ:02.12.2006.

2) ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕುರವರ ಪತ್ರ ಸಂಖ್ಯೆ: ಎಲ್.ಎನ್.ಡಿ.ಸಿ.ಆರ್.:244/ 06–07 ದಿನಾಂಕ:12.01.2007 ಮತ್ತು 05.10.2007.

3) ಸರ್ಕಾರದ ಪತ್ರಸಂಖ್ಯೆ: ಆರ್.ಡಿ: 1337 ಎಲ್‌ಜಿಬಿ 2007, ದಿನಾಂಕ:26.12.2007.

**ಪ್ರಸ್ತಾವನೆ:**

ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರಂ ಹೋಬಳಿ, ಕೌದೇನಹಳ್ಳಿ ಗ್ರಾಮದ ಸ.ನಂ.95/3 ರಲ್ಲಿ ಸರ್ಕಾರಿ ಶಾಲೆಗೆ ಜಮೀನು ಮಂಜೂರು ಮಾಡುವಂತೆ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಬೆಂಗಳೂರು ದಕ್ಷಿಣ ವಲಯ–4, ಕೆ.ಆರ್.ಪುರಂ, ಬೆಂಗಳೂರು ರವರು ಉಲ್ಲೇಖ (1)ರ ಪತ್ರದಲ್ಲಿ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರನ್ನು ಕೋರಿರುತ್ತಾರೆ. ಕಟ್ಟಡ ನಿರ್ಮಾಣಕ್ಕೆ ಅನುದಾನ ಬಿಡುಗಡೆಯಾಗಿದ್ದು, 0–05 ಗುಂಟೆ ಜಮೀನಿಗೆ ನ್ಯಾಯಾಲಯದಲ್ಲಿ ಪ್ರಕರಣಗಳು ಇರುವುದಿಲ್ಲವೆಂದು, ಸರ್ಕಾರಿ ಪಾಠಶಾಲೆ ಕಟ್ಟಡ ನಿರ್ಮಾಣಕ್ಕಾಗಿ ಕ್ಷೇತ್ರ ಶಿಕ್ಷಣಾಧಿಕಾರಿಗಳ ಕೋರಿಕೆಯಂತೆ ಕೌದೇನಹಳ್ಳಿ ಗ್ರಾಮದ ಸ.ನಂ.95/3ರ ಜಮೀನು ದುರಸ್ತಾಗಿ ಖುಲ್ಲಾ ಇರುವ 0–05 ಗುಂಟೆ ಜಮೀನನ್ನು ಮಂಜೂರು ಮಾಡುವಂತೆ ತಹಶೀಲ್ದಾರ್‌ರವರು ಉಲ್ಲೇಖ (2)ರ ಪತ್ರಗಳಲ್ಲಿ ಕಡತ ತಯಾರಿಸಿ ವರದಿ ಸಲ್ಲಿಸಿರುತ್ತಾರೆ.

ದಿನಾಂಕ:23.11.2007ರ ಈ ಪ್ರಾಧಿಕಾರದ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿದ್ದು, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರಂ ಹೋಬಳಿ, ಕೌದೇನಹಳ್ಳಿ ಗ್ರಾಮದ ಸ.ನಂ.95/3 ರಲ್ಲಿನ 0–05 ಗುಂಟೆ ಜಮೀನನ್ನು ಸರ್ಕಾರಿ ಪಾಠಶಾಲೆ ಕಟ್ಟಡಕ್ಕಾಗಿ, ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 71ರಡಿ ಕಾಯ್ದಿರಿಸಿ, ಶಿಕ್ಷಣ ಇಲಾಖೆಗೆ ವರ್ಗಾಯಿಸಲು ಉಲ್ಲೇಖ (3)ರ ಸರ್ಕಾರದ ಪತ್ರದಲ್ಲಿ ಪೂರ್ವಾನುಮೋದನೆ ನೀಡಲಾಗಿರುತ್ತದೆ. ಅಂತೆಯೇ ಈ ಜಮೀನನ್ನು ಶಿಕ್ಷಣ ಇಲಾಖೆಗೆ ವರ್ಗಾಯಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ನಂ.ಎಲ್‌ಎನ್‌ಡಿ (ಪೂ) ಸಿಆರ್: 257/ 2006–07, ದಿನಾಂಕ:6ನೇ ಫೆಬ್ರವರಿ, 2008**

ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್.ಪುರಂ ಹೋಬಳಿ, ಕೌದೇನಹಳ್ಳಿ ಗ್ರಾಮದ ಸ.ನಂ.95/3 ರಲ್ಲಿನ 0–05 ಗುಂಟೆ ಸರ್ಕಾರಿ ಜಮೀನನ್ನು ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ, ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕುರವರ ವರದಿ ಹಾಗೂ ಉಲ್ಲೇಖ (3)ರ ಸರ್ಕಾರದ ಪೂರ್ವಾನುಮೋದನೆಯಂತೆ, ಕರ್ನಾಟಕ ಭೂ ಕಂದಾಯ ಕಾಯ್ದೆ 1964, ಕಲಂ 71 ರಡಿ ಸರ್ಕಾರಿ ಪಾಠಶಾಲೆ ಕಟ್ಟಡಕ್ಕಾಗಿ ಕಾಯ್ದಿರಿಸಿದೆ ಹಾಗೂ ಶಿಕ್ಷಣ ಇಲಾಖೆಗೆ ವರ್ಗಾಯಿಸಲು ಆದೇಶಿಸಿದೆ.

ವಿಶೇಷ ಜಿಲ್ಲಾಧಿಕಾರಿಗಳು,
ಪಿ.ಆರ್.182 ಬೆಂಗಳೂರು ಜಿಲ್ಲೆ, ಬೆಂಗಳೂರು.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
## ಅಧಿಸೂಚನೆ
### ಸಂ.ಮಮಇ 164 ಎಸ್‌ಜೆಡಿ 2008, ಬೆಂಗಳೂರು, ದಿನಾಂಕ:26ನೇ ಮೇ, 2008

ಸರ್ಕಾರದ ಆದೇಶ ಸಂಖ್ಯೆ: ಮಮಇ 422 ಎಸ್‌ಜೆಡಿ 2004 ದಿ: 01–01–2008 ರನ್ವಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆಯಲ್ಲಿ Own Option ಮೇರೆಗೆ ವಿಲೀನಗೊಂಡ ಈ ಕೆಳಕಂಡ ಅಧಿಕಾರಿ/ನೌಕರರುಗಳಿಗೆ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಸ್ಥಳಗಳಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳಲು ಸೂಚಿಸಲಾಗಿದೆ. ತತ್ಪರಿಣಾಮ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ಅಂಗವಿಕಲರ ಇಲಾಖೆಯಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಭಾಗ–2 ರಲ್ಲಿ ವಿಷದೀಕರಿಸಿರುವ ಅಧಿಕಾರಿಗಳ ಸೇವೆಯನ್ನು ಹಿಂತೆಗೆದುಕೊಂಡು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ವೃಂದ ಹುದ್ದೆಗಳಿಗೆ ನಿಯುಕ್ತಿಗೊಳಿಸಲಾಗಿದೆ.

| ಕ್ರ. ಸಂ | ಅಧಿಕಾರಿ/ನೌಕರರ ಪದನಾಮ ಹಾಗೂ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಕಛೇರಿ ಶ್ರೀಯುತರು | ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಇಲಾಖೆಯಲ್ಲಿ ನಿಯುಕ್ತಿಗೊಳಿಸಲಾದ ಸ್ಥಾನ |
|---|---|---|
| 1 | ಎಸ್.ಸಿ.ಚೆನ್ನಯ್ಯ<br>ನಿರೂಪಣಾಧಿಕಾರಿ (ನಿಯಮ 32) ಉಪ ನಿರ್ದೇಶಕರ ಕಛೇರಿ, ಮಮಅಇ, ರಾಮನಗರ | ಅಂಗವಿಕಲರ ಕಲ್ಯಾಣಾಧಿಕಾರಿ,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ, |
| 2 | ಹೆಚ್.ಮಾನಸದೇವಿ,<br>ಸಂಶೋಧನಾಧಿಕಾರಿ,<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ನಿರ್ದೇಶನಾಲಯ,<br>ಬೆಂಗಳೂರು. | ಕಛೇರಿ ವ್ಯವಸ್ಥಾಪಕರು, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ನಿರ್ದೇಶನಾಲಯ ಬೆಂಗಳೂರು. |
| 3 | ಎಸ್.ಶ್ರೀರಾಮುಲು<br>ಅಧೀಕ್ಷಕರು,<br>ಮನೋವಿಕಲ ಬಾಲಕಿಯರ ಬಾಲ ಮಂದಿರ, ಹುಬ್ಬಳ್ಳಿ. | ಅಧೀಕ್ಷಕರು,<br>ಅಂಧ ಮಕ್ಕಳ ಸರ್ಕಾರಿ ಪಾಠ ಶಾಲೆ ಹುಬ್ಬಳ್ಳಿ |
| 4 | ಶ್ರೀ ಎ.ಬಿ.ಹಿರೇಮಠ್,<br>ಬಾಲವಿಕಾಸ ಯೋಜನಾಧಿಕಾರಿ, ಶಿಶು ಅಭಿವೃದ್ಧಿ ಯೋಜನೆ, ಚಿಂಚೋಳಿ, ಗುಲ್ಬರ್ಗಾ ಜಿಲ್ಲೆ | ಅಧೀಕ್ಷಕರು,<br>ಸರ್ಕಾರಿ ಕಿವುಡು ಮಕ್ಕಳ ಪಾಠಶಾಲೆ,<br>ಗುಲ್ಬರ್ಗ |
| 6 | ಸೈಯದ್ ಜಹಿರುದ್ದೀನ್ ಅಧೀಕ್ಷಕರು, ಮಹಿಳಾ ಕಲ್ಯಾಣ ವಿಭಾಗ, ಮಮಅಇ ನಿರ್ದೇಶನಾಲಯ ಬೆಂಗಳೂರು | ಅಧೀಕ್ಷಕರು,<br>ಪ್ರಧಾನ ಕಛೇರಿ, ಅಂಗವಿಕಲರ ಮತ್ತು ಹಿರಿಯ ನಾಗರಿಕರ ಕಲ್ಯಾಣ ಇಲಾಖೆ, ಬೆಂಗಳೂರು. |
| 7 | ನಿರಂಜನ್ ಭಟ್,<br>ಮುಖ್ಯೋಪಾಧ್ಯಾಯರು ಬಾಲಕಿಯರ ಬಾಲಮಂದಿರ, ಉಡುಪಿ, | ಪದವೀಧರ ಸಹಾಯಕ ಶಿಕ್ಷಕರು, ಅಂಧ ಹೆಣ್ಣು ಮಕ್ಕಳ ಪಾಠಶಾಲೆ, ದಾವಣಗೆರೆ, |
| 8 | ಪಿ.ಜೆ.ಉಪಾಧ್ಯ,<br>ಮುಖ್ಯೋಪಾಧ್ಯಾಯರು,<br>ಬಾಲಕರ ಬಾಲ ಮಂದಿರ, ಬಿಜಾಪುರ | ಪದವೀಧರ ಸಹಾಯಕ ಶಿಕ್ಷಕರು,<br>ಅಂಧ ಮಕ್ಕಳ ಪಾಠಶಾಲೆ,<br>ಗುಲ್ಬರ್ಗಾ, |
| 9 | ಕೆ.ಎಂ.ಅಮರನಾಥ್, ಮುಖ್ಯೋಪಾಧ್ಯಾಯರು ಬಾಲಕರ ಬಾಲಮಂದಿರ, ಶಿರಸಿ. | ಪದವೀಧರ ಸಹಾಯಕ ಶಿಕ್ಷಕರು,<br>ಕಿವುಡು ಮಕ್ಕಳ ಪಾಠಶಾಲೆ, ಬಳ್ಳಾರಿ. |
| 10 | ಬನ್ಸಿರಾಂಸಿಂಗ್,<br>ಮುಖ್ಯೋಪಾಧ್ಯಾಯರು ಸರ್ಕಾರಿ ಬಾಲಮಂದಿರ, ಬೀದರ್. | ಪದವೀಧರ ಸಹಾಯಕ ಶಿಕ್ಷಕರು,<br>ಅಂಧ ಮಕ್ಕಳ ಸರ್ಕಾರಿ ಪಾಠ ಶಾಲೆ, ಗುಲ್ಬರ್ಗಾ. |
| 11 | ಹೆಚ್.ಆರ್.ಶ್ರೀನಿವಾಸ್<br>ಮುಖ್ಯೋಪಾಧ್ಯಾಯರು ಬಾಲಕಿಯರ ಬಾಲ ಮಂದಿರ, ಮೈಸೂರು. | ಪದವೀಧರ ಸಹಾಯಕ ಶಿಕ್ಷಕರು,<br>ಕಿವುಡು ಮಕ್ಕಳ ಸರ್ಕಾರಿ ಪಾಠಶಾಲೆ, ಮೈಸೂರು. |

| ಕ್ರ. ಸಂ | ಅಧಿಕಾರಿ/ನೌಕರರ ಪದನಾಮ ಹಾಗೂ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಕಛೇರಿ ಶ್ರೀಯುತರು | ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಇಲಾಖೆಯಲ್ಲಿ ನಿಯುಕ್ತಿಗೊಳಿಸಲಾದ ಸ್ಥಾನ |
|---|---|---|
| 12 | ಡಿ.ಎನ್.ಮೂಲಿಮನಿ, ಮುಖ್ಯೋಪಾಧ್ಯಾಯರು ಬಾಲಕಿಯರ ಬಾಲಮಂದಿರ, ಸವದತ್ತಿ. | ಪದವೀಧರ ಸಹಾಯಕ ಶಿಕ್ಷಕರು, ಅಂಧ ಮಕ್ಕಳ ಸರ್ಕಾರಿ ಪಾಠಶಾಲೆ, ದಾವಣಗೆರೆ. |
| 13 | ದೇವದಾಸ್ ಕೆ. ಪ್ರಥಮ ದರ್ಜೆ ಸಹಾಯಕರು ಮಮಅ.ಇಲಾಖೆ, ಮಂಗಳೂರು. | ಪ್ರಥಮ ದರ್ಜೆ ಸಹಾಯಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಮಂಗಳೂರು. |
| 14 | ಮಹಮದ್ ಅಫಜಲ್ ಪಾಷ ಪ್ರಥಮ ದರ್ಜೆ ಸಹಾಯಕರು, ಶಿಶು ಅಭಿವೃದ್ಧಿ ಯೋಜನೆ, ಸಂತಾಪುರ, ಬೀದರ್ ಜಿಲ್ಲೆ. | ಪ್ರಥಮ ದರ್ಜೆ ಸಹಾಯಕರು, ಅಂಗವಿಕಲರ ಕಲ್ಯಾಣ ವಿಭಾಗ, ಮಮಅ.ಇಲಾಖೆ, ಬೀದರ್. |
| 15 | ಶಾರದಮ್ಮ ಎಂ.ಎಲ್. ಪ್ರಥಮ ದರ್ಜೆ ಸಹಾಯಕರು ಮಮಅ.ಇಲಾಖೆ, ಚಿತ್ರದುರ್ಗ | ಪ್ರಥಮ ದರ್ಜೆ ಸಹಾಯಕರು, ಅಂಗವಿಕಲರ ಕಲ್ಯಾಣ ವಿಭಾಗ, ಮಮಅ.ಇಲಾಖೆ, ಚಿತ್ರದುರ್ಗ. |
| 16 | ಅಣ್ಣಪ್ಪ ಲ.ಕೋಳಿ ಸಹ ಶಿಕ್ಷಕರು, ಬಾಲಕರ ಬಾಲಮಂದಿರ, ಶಿರಸಿ. | ಪಧವೀ ಪೂರ್ವ ಸಹ ಶಿಕ್ಷಕರು, ಅಂಧ ಮಕ್ಕಳ ಪಾಠಶಾಲೆ, ಹುಬ್ಬಳ್ಳಿ. |
| 17 | ಎಲ್.ಎನ್. ಶಿವಕುಮಾರ ಸ್ವಾಮಿ, ದೈಹಿಕ ಶಿಕ್ಷಕರು ಬಾಲಕಿಯರ ಬಾಲಮಂದಿರ, ಮೈಸೂರು | ದೈಹಿಕ ಶಿಕ್ಷಕರು, ಅಂಧ ಮಕ್ಕಳ ಪಾಠಶಾಲೆ, ಮೈಸೂರು. |
| 18 | ಗೋಪಾಲಸ್ವಾಮಿ, ದ್ವಿತೀಯ ದರ್ಜೆ ಸಹಾಯಕ, ಶಿಶು ಅಭಿವೃದ್ಧಿ ಯೋಜನಾ ಕಛೇರಿ, ಬೆಂಗಳೂರು ಕೇಂದ್ರ. | ದ್ವಿತೀಯ ದರ್ಜೆ ಸಹಾಯಕರು, ಪ್ರಧಾನ ಕಛೇರಿ, ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣ ಇಲಾಖೆ, ಬೆಂಗಳೂರು |
| 19 | ಕೃಷ್ಣಪ್ಪ, ದ್ವಿತೀಯ ದರ್ಜೆ ಸಹಾಯಕ, ವೀಕ್ಷಣಾಲಯ, ಮೈಸೂರು. | ದ್ವಿತೀಯ ದರ್ಜೆ ಸಹಾಯಕರು, ಸರ್ಕಾರಿ ಬ್ರೈಲ್ ಮುದ್ರಣಾಲಯ, ಮೈಸೂರು |
| 20 | ಎ.ಎಂ.ಮಂದಣ್ಣ, ದ್ವಿತೀಯ ದರ್ಜೆ ಸಹಾಯಕ, ಬಾಲಕರ ಬಾಲಮಂದಿರ ಮೈಸೂರು. | ದ್ವಿತೀಯ ದರ್ಜೆ ಸಹಾಯಕರು, ಕಿವುಡ ಮಕ್ಕಳ ಸರ್ಕಾರಿ ಪಾಠಶಾಲೆ, ಮೈಸೂರು. |
| 21 | ಜಿ.ಎಂ.ಉಮಾದೇವಿ, ದ್ವಿತೀಯ ದರ್ಜೆ ಸಹಾಯಕರು, ಉಪನಿರ್ದೇಶಕರ ಕಛೇರಿ, ಮಮಅ.ಇಲಾಖೆ, ಬಳ್ಳಾರಿ. | ದ್ವಿತೀಯ ದರ್ಜೆ ಸಹಾಯಕರು, ಅಂಗವಿಕಲರ ಕಲ್ಯಾಣ ವಿಭಾಗ, ಮಮಅ.ಇಲಾಖೆ, ಬಳ್ಳಾರಿ. |
| 22 | ಸಿ.ಎಸ್.ಗಂಗಾಧರ ಸ್ವಾಮಿ, ಬೆರಳಚ್ಚುಗಾರರು ಉಪನಿರ್ದೇಶಕರ ಕಛೇರಿ, ಮಮಅ.ಇಲಾಖೆ. ಮೈಸೂರು. | ಬೆರಳಚ್ಚುಗಾರರು, ಅಂಗವಿಕಲರ ಕಲ್ಯಾಣ ವಿಭಾಗ, ಮಮಅ.ಇಲಾಖೆ, ಹಾಸನ. |
| 23 | ರಾಮನಾಯ್ಕ ಗ್ರೂಪ್ 'ಡಿ' ನೌಕರರು ಉಪನಿರ್ದೇಶಕರ ಕಛೇರಿ, ಮಮಅ.ಇಲಾಖೆ, ಚಾಮರಾಜನಗರ. | ಗ್ರೂಪ್ ಡಿ ನೌಕರರು, ಅಂಗವಿಕಲರ ಕಲ್ಯಾಣ ವಿಭಾಗ, ಮಮಅ.ಇಲಾಖೆ, ಚಾಮರಾಜನಗರ. |
| 24 | ಲಕ್ಷ್ಮೀನರಸಮ್ಮ, ಗೃಹಪಾಲಕಿ, ಸ್ತ್ರೀ ಸ್ವೀಕಾರ ಕೇಂದ್ರ, ಶಿವಮೊಗ್ಗ. | ಗೃಹಪಾಲಕಿ, ಸಮಾಜ ಸೇವಾ ಸಂಕೀರ್ಣ, ಬೆಂಗಳೂರು. |
| 25 | ಎಸ್.ಕೆ.ಅಂಕಲಗಿ, ದ್ವಿತೀಯ ದರ್ಜೆ ಸಹಾಯಕರು, ಶಿಶು ಅಭಿವೃದ್ಧಿ ಯೋಜನಾ ಕಛೇರಿ, ಹರಿಹರ. | ದ್ವಿತೀಯ ದರ್ಜೆ ಸಹಾಯಕರು, ಅಂಧ ಮಕ್ಕಳ ಸರ್ಕಾರಿ ಪಾಠಶಾಲೆ, ದಾವಣಗೆರೆ. |
| 26 | ಅಂಜನಪ್ಪ, ಸಹಾಯಕ ಬಾಲವಿಕಾಸ ಯೋಜನಾಧಿಕಾರಿ, ತುರುವೇಕೆರೆ | ಅಧೀಕ್ಷಕರು, ಪುರುಷರ ಅಂಗವಿಕಲರ ವಸತಿ ನಿಲಯ, ಬೆಂಗಳೂರು. |

ಭಾಗ–2

| ಕ್ರ. ಸಂ | ಅಧಿಕಾರಿ/ನೌಕರರ ಪದನಾಮ ಹಾಗೂ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಕಛೇರಿ ಶ್ರೀಯುತರು | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ನಿಯುಕ್ತಿಗೊಳಿಸಲಾದ ಸ್ಥಳ |
|---|---|---|
| 1 | ಡಾ:ಅನ್ನಪೂರ್ಣ,<br>ಅಂಗವಿಕಲರ ಕಲ್ಯಾಣಾಧಿಕಾರಿ,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ, | ಸಂಶೋಧನಾಧಿಕಾರಿ,<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ನಿರ್ದೇಶನಾಲಯ<br>ಬೆಂಗಳೂರು |
| 2 | ಶ್ರೀ ಅರವಿಂದ ಬಾಬು<br>ಕಛೇರಿ ವ್ಯವಸ್ಥಾಪಕರು,<br>ಅಂಗವಿಕಲರ ಹಾಗೂ ಹಿರಿಯ ನಾಗರಿಕರ<br>ಕಲ್ಯಾಣ ನಿರ್ದೇಶನಾಲಯ ಬೆಂಗಳೂರು | ನಿರೂಪಣಾಧಿಕಾರಿ,<br>(ಅವರ ಸ್ವಂತ ವೇತನದ ಮೇಲೆ)<br>ಉಪ ನಿರ್ದೇಶಕರ ಕಛೇರಿ,<br>ಮಮಅಇ, ರಾಮನಗರ |
| 3 | ಶ್ರೀ ಪುಟ್ಟಪ್ಪ<br>ಅಧೀಕ್ಷಕರು,<br>ಅಂಧ ಮಕ್ಕಳ ಸರ್ಕಾರಿ ಪಾಠ ಶಾಲೆ ಹುಬ್ಬಳ್ಳಿ. | ಅಧೀಕ್ಷಕರು ಮನೋವಿಕಲ ಬಾಲಕಿಯರ ಬಾಲಮಂದಿರ<br>ಹುಬ್ಬಳ್ಳಿ. |
| 4 | ಶ್ರೀ ರಾಜನ್,<br>ಅಧೀಕ್ಷಕರು, ಸರ್ಕಾರಿ ಕಿವುಡು ಮಕ್ಕಳ<br>ಪಾಠಶಾಲೆ, ಗುಲ್ಬರ್ಗಾ. | ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಚಿಂಚೋಳಿ. |
| 5 | ಶ್ರೀಮತಿ ಲತಾ<br>ಅಧೀಕ್ಷಕರು, ಸರ್ಕಾರಿ ಅಂಗವಿಕಲ ಮಹಿಳಾ<br>ವಸತಿ ನಿಲಯ ಬೆಂಗಳೂರು | ಅಧೀಕ್ಷಕರು,<br>ಮಹಿಳಾ ಕಲ್ಯಾಣ ವಿಭಾಗ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ<br>ನಿರ್ದೇಶನಾಲಯ, ಬೆಂಗಳೂರು. |
| 6 | ಶ್ರೀಮತಿ ಅಂಬಿಕಾದೇವಿ,<br>ಪ್ರಥಮ ದರ್ಜೆ ಸಹಾಯಕರು,<br>ಮಮಅ.ಇಲಾಖೆ, ಮಂಗಳೂರು. | ಪ್ರಥಮ ದರ್ಜೆ ಸಹಾಯಕರು,<br>ಅಂಗವಿಕಲ ಕಲ್ಯಾಣ ವಿಭಾಗ,<br>ಮಮಅ.ಇಲಾಖೆ, ಮಂಗಳೂರು. |
| 7 | ಶ್ರೀ ಪ್ರಭುಲಿಂಗ<br>ಪ್ರಥಮ ದರ್ಜೆ ಸಹಾಯಕರು, ಅಂಗವಿಕಲರ<br>ಕಲ್ಯಾಣ ವಿಭಾಗ, ಮಮಅ.ಇಲಾಖೆ, ಬೀದರ್. | ಪ್ರಥಮ ದರ್ಜೆ ಸಹಾಯಕರು,<br>ಶಿಶು ಅಭಿವೃದ್ಧಿ ಯೋಜನೆ, ಸಂತಾಪುರ, ಬೀದರ್ ಜಿಲ್ಲೆ. |
| 8 | ಶ್ರೀ ವಾಗೀಶಾಚಾರ್,<br>ಪ್ರಥಮ ದರ್ಜೆ ಸಹಾಯಕರು, ಅಂಗವಿಕಲರ<br>ಕಲ್ಯಾಣ ವಿಭಾಗ, ಮಮಅ.ಇಲಾಖೆ,<br>ಚಿತ್ರದುರ್ಗ | ಪ್ರಥಮ ದರ್ಜೆ ಸಹಾಯಕರು, ಮಮಅ.ಇಲಾಖೆ, ಚಿತ್ರದುರ್ಗ. |
| 9 | ಶ್ರೀ ಕೃಷ್ಣಯ್ಯ,<br>ದ್ವಿತೀಯ ದರ್ಜೆ ಸಹಾಯಕರು,<br>ಸರ್ಕಾರಿ ಬ್ರೈಲ್ ಮುದ್ರಣಾಲಯ, ಮೈಸೂರು. | ದ್ವಿತೀಯ ದರ್ಜೆ ಸಹಾಯಕರು,<br>ವೀಕ್ಷಣಾಲಯ,<br>ಮೈಸೂರು. |
| 10 | ಶ್ರೀ ಸತ್ಯನಾರಾಯಣ,<br>ದ್ವಿತೀಯ ದರ್ಜೆ ಸಹಾಯಕರು, ಕಿವುಡ<br>ಮಕ್ಕಳ ಸರ್ಕಾರಿ ಪಾಠಶಾಲೆ, ಮೈಸೂರು. | ದ್ವಿತೀಯ ದರ್ಜೆ ಸಹಾಯಕ,<br>ಬಾಲಕರ ಬಾಲಮಂದಿರ,<br>ಮೈಸೂರು. |
| 11 | ಗೌರಮ್ಮ,<br>ಗೃಹಪಾಲಕಿ, ಸಮಾಜ ಸೇವಾ ಸಂಕೀರ್ಣ,<br>ಬೆಂಗಳೂರು. | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ<br>ನಿರ್ದೇಶನಾಲಯ ಇಲ್ಲಿ ಕರ್ತವ್ಯಕ್ಕೆ ಹಾಜರಾದ ನಂತರ,<br>ಅನ್ಯಕರ್ತವ್ಯದ ಮೇಲೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ<br>ಇಲಾಖೆ ಸಚಿವಾಲಯಕ್ಕೆ ನಿಯೋಜಿಸಲಾಗಿದೆ. |

ಭಾರತ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಆದೇಶಾನುಸಾರ

**ಆರ್.ಎಂ. ಚಂದ್ರಮ್ಮ**

ಪಿ.ಆರ್.639

ಸರ್ಕಾರದ ಅಧೀನ ಕಾರ್ಯದರ್ಶಿ,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಶಿಕ್ಷಣ ಇಲಾಖೆ**
**ಸೇರ್ಪಡೆ**

**ಸಂಖ್ಯೆ: ಇಡಿ 37 ಯುಇಸಿ 2006, ಬೆಂಗಳೂರು, ದಿನಾಂಕ:12ನೇ ಫೆಬ್ರವರಿ, 2008**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 37 ಯುಇಸಿ 2006 ದಿನಾಂಕ:10.01.2008ರ 4ನೇ ಪುಟದಲ್ಲಿ ನಮೂದಿಸಿರುವ ಷರತ್ತುಗಳ ನಂತರ ಈ ಕೆಳಗಿನ ಅಂಶಗಳನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

"7) ಇವರ ನೇಮಕಾತಿಯು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 4179/ 2007ರಲ್ಲಿ ನೀಡುವ ಅಂತಿಮ ತೀರ್ಪಿಗೆ ಬದ್ಧವಾಗಿರುತ್ತದೆ."

ಭಾರತ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಆದೇಶಾನುಸಾರ
**ಎಸ್.ಎಂ. ನಂದಕುಮಾರ್**
ಪಿ.ಆರ್.207 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

**ಪೊಲೀಸ್ ಇಲಾಖೆ**
**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರುನಗರ**
**ಅಧಿಸೂಚನೆ**

**ಸಂಖ್ಯೆ: 01/ಡಿಸಿಪಿ/ ಸಂ.ಪೂ/ 2008, ಬೆಂಗಳೂರು, ದಿನಾಂಕ:16ನೇ ಫೆಬ್ರವರಿ, 2008**

ಮೆಟ್ರೋ ರೈಲು ಕಾಮಗಾರಿ ಕೆಲಸವನ್ನು ಬೆಂಗಳೂರು ಮೆಟ್ರೋ ರೈಲು ನಿಗಮ ನಿಯಮಿತ ರವರು ಕೈಗೆತ್ತಿಕೊಂಡು ಬೆಂಗಳೂರು ನಗರ ಸಂಚಾರ ಪೂರ್ವ ವ್ಯಾಪ್ತಿಗೆ ಸೇರಿರುವ ಮಹಾತ್ಮಗಾಂಧಿ ರಸ್ತೆಯಲ್ಲಿ (ಎಂ.ಜಿ. ರಸ್ತೆ) ಅನಿಲ್ ಕುಂಬ್ಳೆ ವೃತ್ತದಿಂದ ಕಾಮಗಾರಿಯನ್ನು ಪ್ರಾರಂಭಿಸಿ ಪ್ರಗತಿಯಲ್ಲಿದ್ದು ಪ್ರಸ್ತುತ ಇಂದಿರಾನಗರ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಇಂದಿರಾನಗರ 100 ಅಡಿ ರಸ್ತೆ ಮತ್ತು ಹಳೇ ಮದ್ರಾಸ್ ರಸ್ತೆಯಲ್ಲಿ ಕಾಮಗಾರಿ ಕೆಲಸವನ್ನು ಪ್ರಾರಂಭಿಸುತ್ತಿದ್ದು, ಈ ಭಾಗದ ರಸ್ತೆಗಳಲ್ಲಿ ಸಾರ್ವಜನಿಕರ ಹಿತದೃಷ್ಟಿಯಿಂದ ಹಾಗೂ ಸುಗಮ ಸಂಚಾರದ ಉದ್ದೇಶದಿಂದ ಹಾಗೂ ಕಾಮಗಾರಿ ಕೆಲಸಕ್ಕೆ ಅಡಚಣೆಯಾಗದಂತೆ ಹಾಗೂ ಕಾಮಗಾರಿಯು ಯಶಸ್ವಿಯಾಗಿ ಪೂರ್ಣಗೊಳ್ಳಲು ಅನುವಾಗುವಂತೆ ಸೂಕ್ತ ಸಂಚಾರ ವ್ಯವಸ್ಥೆ ಮಾಡಿಕೊಡುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್. ಅಚ್ಯುತರಾವ್, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಸಿ.ಎಂ.ಹೆಚ್. ರಸ್ತೆ, ಇಂದಿರಾನಗರ 100 ಅಡಿ ರಸ್ತೆ ಮತ್ತು 80 ಅಡಿ ರಸ್ತೆಗಳಲ್ಲಿ ಮೆಟ್ರೋ ರೈಲು ಕಾಮಗಾರಿ ಪ್ರಯುಕ್ತ ಸುಗಮ ಸಂಚಾರದ ದೃಷ್ಟಿಯಿಂದ ಕೆಳಕಂಡಂತೆ ಸಂಚಾರ ಮಾರ್ಪಾಡುಗಳನ್ನು ಮಾಡಿ ಆದೇಶಿಸಿರುತ್ತೇನೆ.

1) ಬಿ.ಎಂ. ಶ್ರೀ ವೃತ್ತದಿಂದ 100 ಅಡಿ ರಸ್ತೆಯಲ್ಲಿ ಹಳೇ ಮದ್ರಾಸ್ ರಸ್ತೆ (ಓ.ಎಂ. ರಸ್ತೆ) ಜಂಕ್ಷನ್‌ವರೆಗೆ ರಸ್ತೆಯ ಎರಡೂ ಬದಿಗಳಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

2) 80 ಅಡಿ ರಸ್ತೆ- ಹಳೇ ಮದ್ರಾಸ್ ರಸ್ತೆ ಜಂಕ್ಷನ್‌ನಿಂದ 80 ಅಡಿ ರಸ್ತೆ- ಸಿ.ಎಂ.ಹೆಚ್. ರಸ್ತೆ ಜಂಕ್ಷನ್ ವರೆಗೆ ರಸ್ತೆಯ ಎರಡೂ ಬದಿಯಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

3) 80 ಅಡಿ ರಸ್ತೆ- ಸಿ.ಎಂ.ಹೆಚ್. ರಸ್ತೆ ಜಂಕ್ಷನ್‌ನಿಂದ ಬಿ.ಎಂ. ಶ್ರೀ ವೃತ್ತದವರೆಗೆ ರಸ್ತೆಯ ದಕ್ಷಿಣ ಭಾಗದಲ್ಲಿ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

4) 80 ಅಡಿ ರಸ್ತೆ- ಸಿ.ಎಂ.ಹೆಚ್. ರಸ್ತೆ ಜಂಕ್ಷನ್‌ನಿಂದ ಬಿ.ಎಂ. ಶ್ರೀ ವೃತ್ತದವರೆಗೆ ರಸ್ತೆಯ ಉತ್ತರ ಭಾಗದಲ್ಲಿ ಪಾದಚಾರಿ ರಸ್ತೆಯ ಅಂಚಿಗೆ ಸಮಾನಾಂತರವಾಗಿ ವಾಹನಗಳ ನಿಲುಗಡೆಗೆ ಅವಕಾಶ ಕಲ್ಪಿಸಿದೆ.

5) ಈಗಾಗಲೇ ಸಿ.ಎಂ.ಹೆಚ್. ರಸ್ತೆಯಲ್ಲಿ ಬಿ.ಎಂ.ಟಿ.ಸಿ. ಬಸ್ಸುಗಳ ಸಂಚಾರವನ್ನು ಆದರ್ಶದಿಂದ ಬಿ.ಎಂ.ಶ್ರೀ ವೃತ್ತದವರೆಗೆ ನಿಷೇಧಿಸಿದ್ದು ಈ ಬಸ್ಸುಗಳು ಹಳೇ ಮದ್ರಾಸ್ ರಸ್ತೆಯಲ್ಲಿ ಸಂಚರಿಸಿ 100 ಅಡಿ ರಸ್ತೆ ಜಂಕ್ಷನ್‌ನಲ್ಲಿ ಬಲ ತಿರುವು ತೆಗೆದುಕೊಳ್ಳುತ್ತಿದ್ದು ಇನ್ನು ಮುಂದೆ ಬಿ.ಎಂ.ಟಿ.ಸಿ. ಬಸ್ಸುಗಳು ಹಳೇ ಮದ್ರಾಸ್ ರಸ್ತೆಯಲ್ಲಿ ಸಂಚರಿಸಿ 80 ಅಡಿ ರಸ್ತೆಯಲ್ಲಿ ಬಲತಿರುವು ತೆಗೆದುಕೊಂಡು 80 ಅಡಿ ರಸ್ತೆ ಕೃಷ್ಣ ಟೆಂಪಲ್ (ಸಿ.ಎಂ.ಹೆಚ್. ರಸ್ತೆ) ಜಂಕ್ಷನ್ ಬಳಿ ದೊಮ್ಮಲೂರು ಬಿ.ಎಂ.ಟಿ.ಸಿ. ಬಸ್ ನಿಲ್ದಾಣಕ್ಕೆ ಹೋಗುವಂತಹ ಬಸ್ಸುಗಳು ಬಲ ತಿರುವು ತೆಗೆದುಕೊಂಡು ಸಂಚರಿಸುವಂತೆ ವ್ಯವಸ್ಥೆ ಕಲ್ಪಿಸಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:18.02.2008ರಿಂದ ಕಾಮಗಾರಿ ಪೂರ್ಣಗೊಳ್ಳುವವರೆಗೂ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ:16.02.2008 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎನ್. ಅಚ್ಯುತರಾವ್**

ಪಿ.ಆರ್.215

ಪೊಲೀಸ್ ಕಮೀಷನರ್,

ಬೆಂಗಳೂರು ನಗರ.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂಖ್ಯೆ: ಎಲ್.ಎನ್.ಡಿ: (ಪೂ) ಸಿಆರ್:226/ 07–08, ಬೆಂಗಳೂರು, ದಿನಾಂಕ:11ನೇ ಮಾರ್ಚ್, 2008**

**ವಿಷಯ:** ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ವರ್ತೂರು ಗ್ರಾಮದ ಸ.ನಂ.123 ರಲ್ಲಿನ 2–20 ಎಕರೆ/ ಗುಂಟೆ ಸರ್ಕಾರಿ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ:265: ಎಲ್‌ಜಿಬಿ: 2007 (ಭಾಗ–6) ಬೆಂಗಳೂರು, ದಿನಾಂಕ:18.10.2007.

2) ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರ ಪತ್ರದ ಸಂಖ್ಯೆ:ಎಲ್‌ಎನ್‌ಡಿ: ಸಸ: ಸಿಆರ್:490/ 07–08, ದಿನಾಂಕ:24.10.2007.

3) ಈ ಕಛೇರಿ ಸಮ ಸಂಖ್ಯೆ ತಿಳುವಳಿಕೆ ಪತ್ರದ ದಿನಾಂಕ:13.12.2007.

4) ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆರವರ ಪತ್ರ ಸಂಖ್ಯೆ: ಬೆಂಮಸಾಸಂ:ಕೇಕ: ವಾಣಿಜ್ಯ: ಆಸ್ತಿ: 2723/ 07–08 ದಿನಾಂಕ:14.02.2008.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ 3,313–28 ಎಕರೆ/ ಗುಂಟೆ ಸರ್ಕಾರಿ ಜಮೀನನ್ನು ಸರ್ಕಾರಿ/ ಸಾರ್ವಜನಿಕ ಉಪಯೋಗಕ್ಕಾಗಿ ಸಂಬಂಧಿಸಿದ ಸಂಸ್ಥೆಗೆ ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನಲೆಯಲ್ಲಿ, ಉಲ್ಲೇಖ (1) ರಲ್ಲಿನ ಸರ್ಕಾರ ಸಂಖ್ಯೆ: ಆರ್‌ಡಿ 265: ಎಲ್‌ಜಿಬಿ 2007 (ಭಾಗ–6), ಬೆಂಗಳೂರು ದಿನಾಂಕ:18.10.2007ರ ಆದೇಶದಲ್ಲಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ವರ್ತೂರು ಗ್ರಾಮದ ಸ.ನಂ.123 ರಲ್ಲಿನ 2–20 ಎಕರೆ/ ಗುಂಟೆ ಸರ್ಕಾರಿ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಶೇ.50ರಷ್ಟು ಮಾರುಕಟ್ಟೆ ಬೆಲೆ ನಿಗದಿಪಡಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 20(1)(ಸಿ) ಅನ್ವಯ ಮಂಜೂರಾತಿ ಮಾಡಲು ಸರ್ಕಾರ ತನ್ನ ಅನುಮತಿ ನೀಡಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ, ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆರವರಿಗೆ ಜಮೀನಿನ ಕಿಮ್ಮತ್ತು ಮತ್ತು ಇತರೆ ಶುಲ್ಕ ಸೇರಿ ಒಟ್ಟು ರೂ.1,00,60,655–00 (ಒಂದು ಕೋಟಿ ಅರವತ್ತು ಸಾವಿರದ ಆರು ನೂರ ಐವತ್ತೈದು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ಈ ಪ್ರಾಧಿಕಾರದಿಂದ ಉಲ್ಲೇಖ (3)ರ ದಿನಾಂಕ:13.12.2007 ರಂದು ತಿಳುವಳಿಕೆ ಪತ್ರವನ್ನು ನೀಡಲಾಗಿರುತ್ತದೆ. ಅದರಂತೆ ಮೇಲ್ಕಂಡ ಸಂಸ್ಥೆಯವರು ಸರ್ಕಾರಕ್ಕೆ ಚಲನ್ ನಂ.16,17 ಮತ್ತು 18 ರಂತೆ ದಿನಾಂಕ:12.02.2008 ಹಣ ಸಂದಾಯ ಮಾಡಿ, ಮೂಲ ಚಲನ್ ಹಾಜರುಪಡಿಸಿದ್ದು, ನಕ್ಷೆಯೊಂದಿಗೆ ಸಂಸ್ಥೆಗೆ ಜಮೀನನ್ನು ಹಸ್ತಾಂತರಿಸುವಂತೆ ಉಲ್ಲೇಖ (4)ರ ಪತ್ರದಲ್ಲಿ ಕೋರಿರುತ್ತಾರೆ.

ಉಲ್ಲೇಖ (1)ರ ಸರ್ಕಾರದ ಆದೇಶದಂತೆ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ವರ್ತೂರು ಗ್ರಾಮದ ಸ.ನಂ.123 ರಲ್ಲಿನ 2–20 ಎಕರೆ/ ಗುಂಟೆ ಸರ್ಕಾರಿ ಎಂದು ವರ್ಗೀಕೃತವಾದ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ) ರನ್ವಯ ಈ ಕೆಳಕಂಡ ಷರತ್ತುಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

**ಷರತ್ತುಗಳು**

1) ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.

2) ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.

3) ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.

4) ಸಂಸ್ಥೆಗೆ ಮಂಜೂರಾದ ಭೂಮಿಯನ್ನು ಬೇರೆ ಯಾರಿಗೂ ಗುತ್ತಿಗೆ, ಆಧಾರ, ಭೋಗ್ಯಕ್ಕೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನನ್ನು ಯಾವುದೇ ಬ್ಯಾಂಕ್/ ಸಹಕಾರ ಸಂಘಗಳಿಗೆ ಅಭಿವೃದ್ಧಿ

ಕಾಮಗಾರಿಗಳಿಗಾಗಿ ಸಾಲ ಪಡೆಯುವ ಉದ್ದೇಶಕ್ಕೆ ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತಿರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ ಸಂಸ್ಥೆ ಮತ್ತು ಇತರೆ ಪ್ರಾಧಿಕಾರಗಳು ಮುಟ್ಟು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.

5) ಯಾವ ಉದ್ದೇಶಕ್ಕಾಗಿ ಮಂಜೂರಾತಿ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.

6) ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.

7) ಈ ಮಂಜೂರಾತಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

8) ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವೆಂದು ಕಂಡುಬಂದಲ್ಲಿ ಮೂರು ತಿಂಗಳ ನೋಟೀಸನ್ನು ಕೊಟ್ಟು ತರುವಾಯ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಅಭಿವೃದ್ಧಿಪಡಿಸಿದ ಬಾಬ್ತು ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.

9) ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಗೆ ನಿಗದಿತ ಶುಲ್ಕ ಸಂದಾಯ/ ತೆರಿಗೆ ಸಂದಾಯ ಮಾಡಿ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.

10) ಶಾಸನಬದ್ಧ ಕಾಯ್ದೆಗಳ ಕಟ್ಟುಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.

11) ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆ ಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.

12) ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.

13) ಈ ಜಮೀನಿನಲ್ಲಿ ದೊಡ್ಡ ಮತ್ತು ಸಣ್ಣ ಕೆರೆಕಟ್ಟೆ ಇತ್ಯಾದಿಗಳಿದ್ದಲ್ಲಿ ನಕಾಶೆ ದಾರಿಗಳಿದ್ದಲ್ಲಿ ಸಾರ್ವಜನಿಕ ಆಸ್ತಿಯನ್ನು ಸಂರಕ್ಷಿಸಿ ನಿರ್ವಹಿಸತಕ್ಕದ್ದು. ಇವುಗಳ ಮೇಲೆ ಮಂಜೂರಿದಾರರಿಗೆ ಯಾವುದೇ ಹಕ್ಕು ಇರುವುದಿಲ್ಲ.

14) ಅರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 28(2) ರಡಿಯಲ್ಲಿ ನಿಗದಿಪಡಿಸಿರುವ ನಮೂನೆ/ ಫಾರಂ–VI ರಲ್ಲಿ ಕರಾರುಪತ್ರವನ್ನು ಬರೆದುಕೊಡತಕ್ಕದ್ದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ ಈ ಭೂ ಮಂಜೂರಾತಿಯು ತನಗೆ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಅರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.319

**ವಾಣಿಜ್ಯ ತೆರಿಗೆ ಜಂಟಿ ಆಯುಕ್ತರ ಕಛೇರಿ, (ಆಡಳಿತ) ಮೌಲ್ಯವರ್ಧಿತ ತೆರಿಗೆ ವಿಭಾಗ–3, ಬೆಂಗಳೂರು**

**ಸಂಖ್ಯೆ: ವಾತೆಜಂಆ(ಆ)/ ಮೌವತೆವಿ–3/ ಇತರೆ/ 07–08, ಬೆಂಗಳೂರು, ದಿನಾಂಕ:10ನೇ ಮಾರ್ಚ್, 2008**

**ಕಳೆದುಕೊಂಡಿರುವ ಡೆಲಿವರಿ ನೋಟ್ ನಮೂನೆ ಸಂ.505ರ ಕ್ರ.ಸಂ. 0067014 ರಿಂದ 0067018**

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರಬಯಸುವುದೇನೆಂದರೆ ಮೆ: ಶ್ರೀ ವಿನಾಯಕ ಟೈರ್ಸ್, ಕಟ್ಟಡ ಸಂಖ್ಯೆ:21, ಶಾಪ್ ನಂ.5, ವಾಸವಿ ಪ್ಯಾರಡೈಸ್, ಲಾಲಾಬಾಗ್ ಪೋರ್ಟ್ ರಸ್ತೆ, ಬೆಂಗಳೂರು–4 ಟಿನ್ ನಂ.29920724581 ಈ ನೋಂದಾಯಿತ ವರ್ತಕರಿಗೆ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಎಲ್.ವಿ.ಓ–100, ಬೆಂಗಳೂರು ಕಛೇರಿಯವರು ನೀಡಿದ್ದ ಡೆಲಿವರಿ ನೋಟ್ ನಮೂನೆ ಸಂ. 505ರ ಕ್ರ.ಸಂ.0067014 ರಿಂದ 0067018 ರವರೆಗೆ ಒಟ್ಟು (5) ಐದು ನಮೂನೆಗಳನ್ನು ವರ್ತಕರು ಸರಕು ಸಾಗಣೆ ಸಮಯದಲ್ಲಿ ಕಳೆದುಕೊಂಡಿರುತ್ತಾರೆ. ಕಲಂ 53(2) ಕ.ಮೌ.ವ.ತೆ. 2005ರನ್ವಯ ಮೇಲೆ ತಿಳಿಸಿರುವ ನಮೂನೆ 505ರ ಒಟ್ಟು ಐದು ಹಾಳೆಗಳನ್ನು ರದ್ದುಗೊಳಿಸಲಾಗಿದೆ.

ಆದುದರಿಂದ ಈ ಮೇಲ್ಕಂಡ ನಮೂನೆ 505ರ ಐದು ಹಾಳೆಗಳನ್ನು ಯಾವುದೇ ವ್ಯಕ್ತಿ ಅಥವಾ ಸಂಸ್ಥೆ ಉಪಯೋಗಿಸಿದಲ್ಲಿ ಸರ್ಕಾರದ ರಾಜಸ್ವಕ್ಕೆ ಉಂಟಾಗುವ ನಷ್ಟಕ್ಕೆ ವೈಯುಕ್ತಿಕವಾಗಿ ಅವರೇ ಜವಾಬ್ದಾರರಾಗಿರುತ್ತಾರೆ.

ಬೆಂಗಳೂರು
ದಿನಾಂಕ:10.03.2008
ಪಿ.ಆರ್.322

**ಹೆಚ್.ಎಸ್. ಮಂಜೇಗೌಡ**
ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ),
ಮೌಲ್ಯವರ್ಧಿತ ತೆರಿಗೆ ವಿಭಾಗ–3, ಬೆಂಗಳೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ

**ಸಂಖ್ಯೆ: ಎಲ್.ಎನ್.ಡಿ: (ಎನ್.ಎ.) ಸಿಆರ್:194/ 07–08, ಬೆಂಗಳೂರು, ದಿನಾಂಕ:19ನೇ ಮಾರ್ಚ್, 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಶಿವಕೋಟೆ ಗ್ರಾಮದ, ಸ.ನಂ.24 ರಲ್ಲಿ 6.00 ಎಕರೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ:265: ಎಲ್‌ಜಿಬಿ: 2007 (ಭಾಗ–6), ದಿನಾಂಕ:18.10.2007.

2) ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರ ಪತ್ರದ ಸಂಖ್ಯೆ:ಎಲ್ಎನ್‌ಡಿ: (ಎನ್.ಎ): ಸಿಆರ್:467/ 07–08, ದಿನಾಂಕ:22.10.2007.

3) ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆರವರ ಪತ್ರದ ಸಂಖ್ಯೆ: ಬೆಂಮಸಾಸಂ:ಕೇಕ: ವಾಣಿಜ್ಯ: ಆಸ್ತಿ: 2711/ 07–08 ದಿನಾಂಕ:12.02.2008.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ 3313–28 ಎಕರೆಗಳಲ್ಲಿ ವಿವಿಧ ಸಾರ್ವಜನಿಕ/ ಸಾರ್ವಜನಿಕ ಬೆಳವಣಿಗೆ ಉದ್ದೇಶಗಳಿಗೆ ಅಗತ್ಯವಾಗಿರುವ ಹಿನ್ನಲೆಯಲ್ಲಿ ಸಂಬಂಧಪಟ್ಟ ವಿವಿಧ ಸರ್ಕಾರಿ ಸಂಸ್ಥೆಗಳಿಗೆ ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನಲೆಯಲ್ಲಿ ಉಲ್ಲೇಖ (1) ರಲ್ಲಿನ ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ. 265: ಎಲ್.ಜಿ.ಬಿ. 2007, (ಭಾಗ–6), ಬೆಂಗಳೂರು, ದಿನಾಂಕ:18.10.2007 ರ ಆದೇಶದಲ್ಲಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಶಿವಕೋಟೆ ಗ್ರಾಮದ, ಸ.ನಂ.24ರಲ್ಲಿ 6.00 ಎಕರೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಬೆಲೆ ನಿಗದಿಪಡಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 20(1) (ಸಿ) ಅನ್ವಯ ಮಂಜೂರಾತಿ ಮಾಡಲು ಸರ್ಕಾರ ತನ್ನ ಅನುಮತಿ ನೀಡಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ, ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆರವರಿಗೆ ಜಮೀನಿನ ಕಿಮ್ಮತ್ತು ಮತ್ತು ಇತರೆ ಶುಲ್ಕವನ್ನು ಸೇರಿ ಒಟ್ಟು ರೂ.59,96,755–00 (ಐವತ್ತೊಂಬತ್ತು ಲಕ್ಷದ ತೊಂಬತ್ತಾರು ಸಾವಿರದ ಏಳುನೂರ ಐವತ್ತೈದು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ಈ ಪ್ರಾಧಿಕಾರದಿಂದ ದಿನಾಂಕ:15.12.2007 ರಂದು ತಿಳುವಳಿಕೆ ನೀಡಲಾಗಿತ್ತು. ಅದರಂತೆ ಮೇಲ್ಕಂಡ ಸಂಸ್ಥೆಯವರು ಸರ್ಕಾರಕ್ಕೆ ಚಲನ್ ನಂ.608005, 608004, 608003, ದಿನಾಂಕ:11.02.2008 ರಲ್ಲಿ ಹಣವನ್ನು ಸಂದಾಯ ಮಾಡಿ, ಮೂಲ ಚಲನ್ ಹಾಜರುಪಡಿಸಿದ್ದು, ಭೂ ಮಂಜೂರಾತಿ ಆದೇಶವನ್ನು ನೀಡಬೇಕೆಂದು ಉಲ್ಲೇಖ (3)ರ ಪತ್ರದಲ್ಲಿ ಕೋರಿರುತ್ತಾರೆ.

ಉಲ್ಲೇಖ (1)ರ ಸರ್ಕಾರದ ಆದೇಶದಂತೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಶಿವಕೋಟೆ ಗ್ರಾಮದ ಸ.ನಂ.24 ರಲ್ಲಿ 6.00 ಎಕರೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ) ರನ್ವಯ ಈ ಕೆಳಕಂಡ ಷರತ್ತುಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

### ಷರತ್ತುಗಳು

1) ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.

2) ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.

3) ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.

4) ಸಂಸ್ಥೆಗೆ ಮಂಜೂರಾದ ಭೂಮಿಯನ್ನು ಬೇರೆ ಯಾರಿಗೂ ಗುತ್ತಿಗೆಗೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನನ್ನು ಯಾವುದೇ ಬ್ಯಾಂಕ್/ ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯಲು ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತಿರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ ಸಂಸ್ಥೆ ಮತ್ತು ಪ್ರಾಧಿಕಾರ ಮುಟ್ಟು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.

5) ಯಾವ ಉದ್ದೇಶಕ್ಕಾಗಿ ಮಂಜೂರಾತಿ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.

6) ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.

7) ಈ ಮಂಜೂರಾತಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

8) ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾಗಿದ್ದರೆ ಮೂರು ತಿಂಗಳ ನೋಟೀಸನ್ನು ಕೊಟ್ಟು ತರುವಾಯ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.

9) ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.

10) ಶಾಸನಬದ್ಧ ಕಾಯ್ದೆಗಳ ಕಟ್ಟುಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.

11) ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆ ಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.

12) ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.

13) ಅರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 28(2) ರಡಿಯಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಕರಾರುಪತ್ರವನ್ನು ಬರೆದುಕೊಡತಕ್ಕದ್ದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ ಈ ಭೂ ಮಂಜೂರಾತಿಯು ತನಗೆ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಅರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.345

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂಖ್ಯೆ: ಎಲ್.ಎನ್.ಡಿ: (ಎನ್.ಎ.) ಸಿಆರ್:229/ 07–08, ಬೆಂಗಳೂರು, ದಿನಾಂಕ:19ನೇ ಮಾರ್ಚ್, 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ದೊಡ್ಡಜಾಲ ಗ್ರಾಮದ, ಸ.ನಂ.46 ರಲ್ಲಿ 2.00 ಎಕರೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ:265: ಎಲ್‌ಜಿಬಿ: 2007 (ಭಾಗ–6) ಬೆಂಗಳೂರು, ದಿನಾಂಕ:18.10.2007.

2) ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರ ಪತ್ರದ ಸಂಖ್ಯೆ:ಎಲ್‌ಎನ್‌ಡಿ: (ಎನ್.ಎ): ಸಿಆರ್:493/ 07–08, ದಿನಾಂಕ:31.10.2007.

3) ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆರವರ ಪತ್ರದ ಸಂಖ್ಯೆ: ಬೆಂಮಸಾಸಂ:ಕೇಕ: ವಾಣಿಜ್ಯ: ಆಸ್ತಿ: 2708/ 07–08 ದಿನಾಂಕ:12.02.2008.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ 3313–28 ಎಕರೆಗಳಲ್ಲಿ ವಿವಿಧ ಸಾರ್ವಜನಿಕ/ ಸಾರ್ವಜನಿಕ ಬೆಳವಣಿಗೆ ಉದ್ದೇಶಗಳಿಗೆ ಅಗತ್ಯವಾಗಿರುವ ಹಿನ್ನಲೆಯಲ್ಲಿ ಸಂಬಂಧಪಟ್ಟ ವಿವಿಧ ಸರ್ಕಾರಿ ಸಂಸ್ಥೆಗಳಿಗೆ ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನಲೆಯಲ್ಲಿ ಉಲ್ಲೇಖ (1) ರಲ್ಲಿನ ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ.265:ಎಲ್.ಜಿ.ಬಿ. 2007, (ಭಾಗ–6), ಬೆಂಗಳೂರು, ದಿನಾಂಕ:18.10.2007ರ ಆದೇಶದಲ್ಲಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ದೊಡ್ಡಜಾಲ ಗ್ರಾಮದ, ಸ.ನಂ.46 ರಲ್ಲಿ 2.00 ಎಕರೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಬೆಲೆ ನಿಗದಿಪಡಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 20(1) (ಸಿ) ಅನ್ವಯ ಮಂಜೂರಾತಿ ಮಾಡಲು ಸರ್ಕಾರ ತನ್ನ ಅನುಮತಿ ನೀಡಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ, ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆರವರಿಗೆ ಜಮೀನಿನ ಕಿಮ್ಮತ್ತು ಮತ್ತು ಇತರೆ ಶುಲ್ಕವನ್ನು ಸೇರಿ ಒಟ್ಟು ರೂ.69,48,955–00 (ಅರವತ್ತೊಂಬತ್ತು ಲಕ್ಷದ ನಲವತ್ತೆಂಟು ಸಾವಿರದ ಒಂಬೈನೂರ ಐವತ್ತೈದು) ಗಳನ್ನು ಪಾವತಿಸಲು ಈ ಪ್ರಾಧಿಕಾರದಿಂದ ದಿನಾಂಕ:27.11.2007 ರಂದು ತಿಳುವಳಿಕೆ ನೀಡಲಾಗಿತ್ತು. ಅದರಂತೆ ಮೇಲ್ಕಂಡ ಸಂಸ್ಥೆಯವರು ಸರ್ಕಾರಕ್ಕೆ ಚಲನ್ ನಂ.115698, 115697, 115699, ದಿನಾಂಕ:08.02.2008 ರಲ್ಲಿ ಹಣವನ್ನು ಸಂದಾಯ ಮಾಡಿ, ಮೂಲ ಚಲನ್ ಹಾಜರುಪಡಿಸಿದ್ದು, ಭೂ ಮಂಜೂರಾತಿ ಆದೇಶವನ್ನು ನೀಡಬೇಕೆಂದು ಉಲ್ಲೇಖ (3)ರ ಪತ್ರದಲ್ಲಿ ಕೋರಿರುತ್ತಾರೆ.

ಉಲ್ಲೇಖ (1)ರ ಸರ್ಕಾರದ ಆದೇಶದಂತೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ದೊಡ್ಡಜಾಲ ಗ್ರಾಮದ ಸ.ನಂ.46 ರಲ್ಲಿ 2.00 ಎಕರೆ ಜಮೀನನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ) ರನ್ವಯ ಈ ಕೆಳಕಂಡ ಷರತ್ತುಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

**ಷರತ್ತುಗಳು**

1) ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.

2) ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.

3) ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.

4) ಸಂಸ್ಥೆಗೆ ಮಂಜೂರಾದ ಭೂಮಿಯನ್ನು ಬೇರೆ ಯಾರಿಗೂ ಗುತ್ತಿಗೆಗೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನನ್ನು ಯಾವುದೇ ಬ್ಯಾಂಕ್/ ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯಲು ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತಿರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ ಸಂಸ್ಥೆ ಮತ್ತು ಪ್ರಾಧಿಕಾರ ಮುಟ್ಟು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.

5) ಯಾವ ಉದ್ದೇಶಕ್ಕಾಗಿ ಮಂಜೂರಾತಿ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.

6) ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.

7) ಈ ಮಂಜೂರಾತಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

8) ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾಗಿದ್ದರೆ ಮೂರು ತಿಂಗಳ ನೋಟೀಸನ್ನು ಕೊಟ್ಟು ತರುವಾಯ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.

9) ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.

10) ಶಾಸನಬದ್ಧ ಕಾಯ್ದೆಗಳ ಕಟ್ಟುಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.

11) ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆ ಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.

12) ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.

13) ಅರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 28(2) ರಡಿಯಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಕರಾರುಪತ್ರವನ್ನು ಬರೆದುಕೊಡತಕ್ಕದ್ದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ ಈ ಭೂ ಮಂಜೂರಾತಿಯು ತನಗೆ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಅರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.346

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂಖ್ಯೆ: ಎಲ್.ಎನ್.ಡಿ: (ಎನ್.ಎ.) ಸಿಆರ್:206/ 07-08, ಬೆಂಗಳೂರು, ದಿನಾಂಕ:19ನೇ ಮಾರ್ಚ್, 2008**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಶ್ರೀರಾಮನಹಳ್ಳಿ ಗ್ರಾಮದ, ಸ.ನಂ.33 ರಲ್ಲಿ 38.00 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ:265: ಎಲ್‌ಜಿಬಿ: 2007 (ಭಾಗ–6) ಬೆಂಗಳೂರು, ದಿನಾಂಕ:18.10.2007.

2) ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು ರವರ ಪತ್ರದ ಸಂಖ್ಯೆ:ಎಲ್‌ಎನ್‌ಡಿ: (ಎನ್.ಎ): ಸಿಆರ್:468/ 07–08, ದಿನಾಂಕ:24.10.2007.

3) ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ ರವರ ಪತ್ರದ ಸಂಖ್ಯೆ: ಭೂಸ್ವಾಧೀನ 36/07–08, ದಿನಾಂಕ:12.03.2008.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ 3313–28 ಎಕರೆಗಳಲ್ಲಿ ವಿವಿಧ ಸಾರ್ವಜನಿಕ/ ಸಾರ್ವಜನಿಕ ಬೆಳವಣಿಗೆ ಉದ್ದೇಶಗಳಿಗೆ ಅಗತ್ಯವಾಗಿರುವ ಹಿನ್ನಲೆಯಲ್ಲಿ ಸಂಬಂಧಪಟ್ಟ ವಿವಿಧ ಸರ್ಕಾರಿ ಸಂಸ್ಥೆಗಳಿಗೆ ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನಲೆಯಲ್ಲಿ ಉಲ್ಲೇಖ (1) ರಲ್ಲಿನ ಸರ್ಕಾರದ ಪತ್ರದ ಸಂಖ್ಯೆ: ಆರ್.ಡಿ. 265: ಎಲ್.ಜಿ.ಬಿ. 2007, (ಭಾಗ–6), ಬೆಂಗಳೂರು, ದಿನಾಂಕ:18.10.2007ರ ಆದೇಶದಲ್ಲಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಶ್ರೀರಾಮನಹಳ್ಳಿ ಗ್ರಾಮದ, ಸ.ನಂ.33ರಲ್ಲಿ 38.00 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತಗೆ ಬೆಲೆ ನಿಗದಿಪಡಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 20(1)(ಸಿ) ಅನ್ವಯ ಮಂಜೂರಾತಿ ಮಾಡಲು ಸರ್ಕಾರ ತನ್ನ ಅನುಮತಿ ನೀಡಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ, ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತರವರಿಗೆ ಜಮೀನಿನ ಕಿಮ್ಮತ್ತು ಮತ್ತು ಇತರೆ ಶುಲ್ಕವನ್ನು ಸೇರಿ ಒಟ್ಟು ರೂ.11,11,29,155–00 (ಹನ್ನೊಂದು ಕೋಟಿ ಹನ್ನೊಂದು ಲಕ್ಷದ ಇಪ್ಪತ್ತೊಂಬತ್ತು ಸಾವಿರದ ನೂರ ಐವತ್ತೈದು) ಗಳನ್ನು ಪಾವತಿಸಲು ಈ ಪ್ರಾಧಿಕಾರದಿಂದ ದಿನಾಂಕ:13.11.2007ರಂದು ತಿಳುವಳಿಕೆ ನೀಡಲಾಗಿತ್ತು. ಅದರಂತೆ ಮೇಲ್ಕಂಡ ಸಂಸ್ಥೆಯವರು ಸರ್ಕಾರಕ್ಕೆ, ಚಲನ್ ನಂ.4443/3 ಮತ್ತು 4067/3, ದಿನಾಂಕ:11.03.2008 ರಲ್ಲಿ ಹಣವನ್ನು ಸಂದಾಯ ಮಾಡಿ, ಮೂಲ ಚಲನ್ ಹಾಜರುಪಡಿಸಿದ್ದು ಭೂ ಮಂಜೂರಾತಿ ಆದೇಶವನ್ನು ನೀಡಬೇಕೆಂದು ಉಲ್ಲೇಖ (3)ರ ಪತ್ರದಲ್ಲಿ ಕೋರಿರುತ್ತಾರೆ.

ಉಲ್ಲೇಖ (1)ರ ಸರ್ಕಾರದ ಆದೇಶದಂತೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಶ್ರೀರಾಮನಹಳ್ಳಿ ಗ್ರಾಮದ ಸ.ನಂ.33 ರಲ್ಲಿ 38.00 ಎಕರೆ ಜಮೀನನ್ನು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ) ರನ್ವಯ ಈ ಕೆಳಕಂಡ ಷರತ್ತುಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

**ಷರತ್ತುಗಳು**

1) ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.

2) ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.

3) ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.

4) ಸಂಸ್ಥೆಗೆ ಮಂಜೂರಾದ ಭೂಮಿಯನ್ನು ಬೇರೆ ಯಾರಿಗೂ ಗುತ್ತಿಗೆಗೆ ಕೊಡತಕ್ಕದ್ದಲ್ಲ ಅಥವಾ ಪರಭಾರೆ ಮಾಡತಕ್ಕದ್ದಲ್ಲ. ಆದರೆ ಈ ಜಮೀನನ್ನು ಯಾವುದೇ ಬ್ಯಾಂಕ್/ ಸಹಕಾರ ಸಂಘಗಳಿಗೆ ಅಭಿವೃದ್ಧಿ ಕಾಮಗಾರಿಗಳಿಗಾಗಿ ಸಾಲ ಪಡೆಯಲು ಆಧಾರ ಮಾಡಲು ಅನುಮತಿ ನೀಡಲಾಗಿದೆ. ಆದರೆ ಸಾಲ ತಿರುವಳಿಗಾಗಿ ಈ ಜಮೀನನ್ನು ಬ್ಯಾಂಕ್/ ಸಂಸ್ಥೆ ಮತ್ತು ಪ್ರಾಧಿಕಾರ ಮುಟ್ಟು ಹಾಕಿಕೊಳ್ಳಲು ಹಕ್ಕು ಇರುವುದಿಲ್ಲ.

5) ಯಾವ ಉದ್ದೇಶಕ್ಕಾಗಿ ಮಂಜೂರಾತಿ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.

6) ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.

7) ಈ ಮಂಜೂರಾತಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

8) ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾಗಿದ್ದರೆ ಮೂರು ತಿಂಗಳ ನೋಟೀಸನ್ನು ಕೊಟ್ಟು ತರುವಾಯ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.

9) ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.

10) ಶಾಸನಬದ್ಧ ಕಾಯ್ದೆಗಳ ಕಟ್ಟುಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.

11) ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆ ಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.

12) ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.

13) ಅರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 28(2) ರಡಿಯಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಕರಾರುಪತ್ರವನ್ನು ಬರೆದುಕೊಡತಕ್ಕದ್ದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ ಈ ಭೂ ಮಂಜೂರಾತಿಯು ತನಗೆ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಅರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.347

## ಅಬಕಾರಿ ಆಯುಕ್ತರ ಕಛೇರಿ, ಒಕ್ಕಲಿಗರ ಭವನ, ಬೆಂಗಳೂರು

## ಅಧಿಸೂಚನೆ

**ಸಂಖ್ಯೆ: ಇಸಿಇ 24 ಕೇ.ಮಾಹಅ: 2005, ಬೆಂಗಳೂರು, ದಿನಾಂಕ:19ನೇ ಮಾರ್ಚ್, 2008**

ಅಧಿಸೂಚನೆ ಸಂಖ್ಯೆ: ಇಸಿಇ 24 ಕೇ.ಮಾಹಅ: 2005 ದಿನಾಂಕ:08.12.2005 ರಲ್ಲಿ ಅಬಕಾರಿ ಇಲಾಖೆಗೆ ಸಂಬಂಧಿಸಿದಂತೆ ಮಾಹಿತಿಯನ್ನು ಒದಗಿಸಲು ಸಾರ್ವಜನಿಕ ಮಾಹಿತಿ ಅಧಿಕಾರಿ, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಕ ಮಾಡಲಾಗಿದೆ. ಸದರಿ ಅಧಿಸೂಚನೆಯಲ್ಲಿ ಅಬಕಾರಿ ಆಯುಕ್ತರ ಕಛೇರಿಗೆ ಸಂಬಂಧಪಟ್ಟಂತೆ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ (ಆಡಳಿತ) ಇವರನ್ನು ಸಾರ್ವಜನಿಕ ಮಾಹಿತಿ ಅಧಿಕಾರಿಯನ್ನಾಗಿ ನೇಮಕ ಮಾಡಲಾಗಿದ್ದು, ಸದರಿ ಹುದ್ದೆಯನ್ನು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ: 324: ಆಸೇಇ: 2007 ದಿನಾಂಕ:28.12.2007ರಲ್ಲಿ ಜಂಟಿ ಆಯುಕ್ತರು (ಆಡಳಿತ) ಎಂದು ಮರುಪದನಾಮೀಕರಿಸಿರುವುದರಿಂದ, ಅಬಕಾರಿ ಆಯುಕ್ತರ ಕಛೇರಿಗೆ ಸಂಬಂಧಪಟ್ಟಂತೆ ಸಾರ್ವಜನಿಕ ಮಾಹಿತಿ ಅಧಿಕಾರಿಯನ್ನು ಭಾಗಶಃ ಮಾರ್ಪಡಿಸಿ ಕೆಳಕಂಡಂತೆ ನೇಮಕ ಮಾಡಲಾಗಿದೆ.

| ಕ್ರ. ಸಂ. | ಕಛೇರಿ ಹೆಸರು | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 5(1)ರ ಪ್ರಕಾರ ರಾಜ್ಯ ಮಟ್ಟದಲ್ಲಿ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 5(2)ರ ಪ್ರಕಾರ ರಾಜ್ಯ ಮಟ್ಟದಲ್ಲಿ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 19(1)ರ ಪ್ರಕಾರ ರಾಜ್ಯ ಮಟ್ಟದಲ್ಲಿ ಮೇಲ್ಮನವಿ ಅಧಿಕಾರಿ |
|---|---|---|---|---|
| 1. | ಅಬಕಾರಿ ಆಯುಕ್ತರ ಕಛೇರಿ, ಬೆಂಗಳೂರು | ಜಂಟಿ ಆಯುಕ್ತರು (ಆಡಳಿತ) ಅಬಕಾರಿ ಆಯುಕ್ತರ ಕಛೇರಿ | 1ನೇ ಕೇಂದ್ರ ಸಹಾಯಕರು | ಅಬಕಾರಿ ಜಂಟಿ ಆಯುಕ್ತರು (ಕೇಂದ್ರಸ್ಥಾನ ಮತ್ತು ಆಡಳಿತ) ಅಬಕಾರಿ ಆಯುಕ್ತರ ಕಛೇರಿ. |

ಪಿ.ಆರ್.348

ಅಬಕಾರಿ ಆಯುಕ್ತರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ ಪತ್ರ

**ನಂ. ಎಲ್.ಆರ್.ಎಫ್.(ಎಸ್) (109)ಸಿಆರ್:5/08–09, ಬೆಂಗಳೂರು, ದಿನಾಂಕ:30ನೇ ಮೇ, 2008**

**ವಿಷಯ:** ಶ್ರೀ ಗಂಗೋತ್ರಿ ಅಸೋಸಿಯೇಟ್ಸ್, ನಂ.1836, 5ನೇ ಮುಖ್ಯ ರಸ್ತೆ, 12ನೇ ಕ್ರಾಸ್, ಆರ್.ಪಿ.ಸಿ. ಲೇಔಟ್, ಬೆಂಗಳೂರು–40 ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೊಮ್ಮಘಟ್ಟ ಗ್ರಾಮದ ಸ.ನಂ.64 ರಲ್ಲಿ 3–00 ಎಕರೆ, ರಾಮಸಂದ್ರ ಗ್ರಾಮದ ಸ.ನಂ.100/3 ರಲ್ಲಿ 0–20 ಗುಂಟೆ, 100/2 ರಲ್ಲಿ 1–20 ಎಕರೆ: ಗುಂಟೆ, 104/3 ರಲ್ಲಿ 0–20 ಗುಂಟೆ, 102ರಲ್ಲಿ 1–20 ಎಕರೆ:ಗುಂಟೆ ಒಟ್ಟು 7–00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಶ್ರೀ ಗಂಗೋತ್ರಿ ಅಸೋಸಿಯೇಟ್ಸ್, ನಂ.1836, 5ನೇ ಮುಖ್ಯ ರಸ್ತೆ, 12ನೇ ಕ್ರಾಸ್, ಆರ್.ಪಿ.ಸಿ. ಲೇಔಟ್, ಬೆಂಗಳೂರು–40 ರವರು ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೊಮ್ಮಘಟ್ಟ ಗ್ರಾಮದ ಸ.ನಂ.64ರಲ್ಲಿ 3–00 ಎಕರೆ, ರಾಮಸಂದ್ರ ಗ್ರಾಮದ ಸ.ನಂ.100/3 ರಲ್ಲಿ 0–20 ಗುಂಟೆ, 100/2 ರಲ್ಲಿ 1–20 ಎಕರೆ: ಗುಂಟೆ, 104/3 ರಲ್ಲಿ 0–20 ಗುಂಟೆ, 102 ರಲ್ಲಿ 1–20 ಎಕರೆ: ಗುಂಟೆ ಒಟ್ಟು 7–00 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ–15ಎ ಮತ್ತು ನಮೂನೆ–15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗ ರವರ ಪತ್ರದ ನಂ.ಎಲ್.ಆರ್.ಎಫ್ (109) ಸಿ.ಆರ್: 01/08–09, ದಿನಾಂಕ:07.05.2008ರಲ್ಲಿ ಪ್ರಸ್ತಾವಿತ ಕೊಮ್ಮಘಟ್ಟ ಗ್ರಾಮದ ಸ.ನಂ. 64 ರಲ್ಲಿ 3–00 ಎಕರೆ, ರಾಮಸಂದ್ರ ಗ್ರಾಮದ ಸ.ನಂ.100/3 ರಲ್ಲಿ 0–20 ಗುಂಟೆ, 100/2 ರಲ್ಲಿ 1–20 ಎಕರೆ: ಗುಂಟೆ, 104/3ರಲ್ಲಿ 0–20 ಗುಂಟೆ, 102 ರಲ್ಲಿ 1–20 ಎಕರೆ: ಗುಂಟೆ ಗ್ರಾಮದ ಸ.ನಂ. ಒಟ್ಟು 7–00 ಎಕರೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I)(II) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು 977/05–06, ದಿನಾಂಕ:22.07.2005 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾವಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I)(II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಕೊಮ್ಮಘಟ್ಟ ಗ್ರಾಮದ ಸ.ನಂ.64ರಲ್ಲಿ 3–00 ಎಕರೆ, ರಾಮಸಂದ್ರ ಗ್ರಾಮದ ಸ.ನಂ.100/3 ರಲ್ಲಿ 0–20 ಗುಂಟೆ, 100/2 ರಲ್ಲಿ 1–20 ಎಕರೆ: ಗುಂಟೆ, 104/3ರಲ್ಲಿ 0–20 ಗುಂಟೆ, 102 ರಲ್ಲಿ 1–20 ಎಕರೆ: ಗುಂಟೆ ಗ್ರಾಮದ ಸ.ನಂ. ಒಟ್ಟು 7–00 ಎಕರೆ ಜಮೀನನ್ನು ಶ್ರೀ ಗಂಗೋತ್ರಿ ಅಸೋಸಿಯೇಟ್ಸ್, ನಂ.1836, 5ನೇ ಮುಖ್ಯ ರಸ್ತೆ, 12ನೇ ಕ್ರಾಸ್, ಆರ್.ಪಿ.ಸಿ. ಲೇಔಟ್, ಬೆಂಗಳೂರು–40 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I)(II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ. ವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ:23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡಾ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3) ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.

5) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ., ಒ.ಡಿ.ಪಿ. ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.

6) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.

7) ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಪಿ.ಆರ್.636 ಬೆಂಗಳೂರು ಜಿಲ್ಲೆ, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ ಪತ್ರ**

**ನಂ. ಎಲ್.ಆರ್.ಎಫ್.(ಎನ್.ಎ.) (109)ಸಿಆರ್:21/07-08, ಬೆಂಗಳೂರು, ದಿನಾಂಕ:28ನೇ ಮೇ, 2008**

**ವಿಷಯ:** ಈರಣ್ಣ ಟ್ರಸ್ಟ್, ನಂ.79, ಕೊಂಡಶೆಟ್ಟಿಹಳ್ಳಿ ರಸ್ತೆ, ಮಾವಳ್ಳಿಪುರ, ಹೆಸರಘಟ್ಟ ಹೋಬಳಿ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಬೆಂಗಳೂರು-560089 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಮಾವಳ್ಳಿಪುರ ಗ್ರಾಮದ ಸ.ನಂ.79 ರಲ್ಲಿ 4-29 ಎಕರೆ: ಗುಂಟೆ ಹಾಗೂ ಕೊಂಡಶೆಟ್ಟಿಹಳ್ಳಿ ಗ್ರಾಮದ ಸ.ನಂ.10/1 ರಲ್ಲಿ 1-00 ಎಕರೆ, ಸ.ನಂ.19 ರಲ್ಲಿ 2-08 ಎಕರೆ: ಗುಂಟೆ ಮತ್ತು ಸ.ನಂ.20 ರಲ್ಲಿ 2-00 ಎಕರೆ ಒಟ್ಟು 9-37 ಎಕರೆ: ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109ರಡಿ ಖರೀದಿಸಲು ಅನುಮತಿ ಕೋರಿರುವ ಬಗ್ಗೆ.

ಈರಣ್ಣ ಟ್ರಸ್ಟ್, ನಂ.79, ಕೊಂಡಶೆಟ್ಟಿಹಳ್ಳಿ ರಸ್ತೆ, ಮಾವಳ್ಳಿಪುರ, ಹೆಸರಘಟ್ಟ ಹೋಬಳಿ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಬೆಂಗಳೂರು-560089 ರವರು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಮಾವಳ್ಳಿಪುರ ಗ್ರಾಮದ ಸ.ನಂ.79 ರಲ್ಲಿ 4-29 ಎಕರೆ: ಗುಂಟೆ ಹಾಗೂ ಕೊಂಡಶೆಟ್ಟಿಹಳ್ಳಿ ಗ್ರಾಮದ ಸ.ನಂ.10/1 ರಲ್ಲಿ 1-00 ಎಕರೆ, ಸ.ನಂ.19 ರಲ್ಲಿ 2-08 ಎಕರೆ: ಗುಂಟೆ ಮತ್ತು ಸ.ನಂ.20 ರಲ್ಲಿ 2-00 ಎಕರೆ ಒಟ್ಟು 9-37 ಎಕರೆ: ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ-15ಎ ಮತ್ತು ನಮೂನೆ-15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ಉತ್ತರ ಉಪವಿಭಾಗ ರವರ ಪತ್ರದ ನಂ. ಎಲ್.ಆರ್.ಎಫ್. (ಬಿಎನ್ಎ) ಸಿ.ಆರ್: 602/07-08, ದಿನಾಂಕ:31.03.2008ರಲ್ಲಿ ಪ್ರಸ್ತಾವಿತ ಮಾವಳ್ಳಿಪುರ ಗ್ರಾಮದ ಸ.ನಂ.79ರಲ್ಲಿ 4-29 ಎಕರೆ: ಗುಂಟೆ ಹಾಗೂ ಕೊಂಡಶೆಟ್ಟಿಹಳ್ಳಿ ಗ್ರಾಮದ ಸ.ನಂ.10/1 ರಲ್ಲಿ 1-00 ಎಕರೆ, ಸ.ನಂ.19 ರಲ್ಲಿ 2-08 ಎಕರೆ: ಗುಂಟೆ ಮತ್ತು ಸ.ನಂ.20 ರಲ್ಲಿ 2-00 ಎಕರೆ ಗ್ರಾಮದ ಸ.ನಂ. ಒಟ್ಟು 9-37 ಎಕರೆ: ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I)(II) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯ ರಿ.ನಂ.120/07-08, ದಿನಾಂಕ:26.11.2007 ರಂದು ನೊಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾಪಿತ ಜಮೀನು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995ರ ಪ್ರಕಾರ ಕಲಂ 109 (I)(II) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಮಾವಳ್ಳಿಪುರ ಗ್ರಾಮದ ಸ.ನಂ.79ರಲ್ಲಿ 4-29 ಎಕರೆ: ಗುಂಟೆ ಹಾಗೂ ಕೊಂಡಶೆಟ್ಟಿಹಳ್ಳಿ ಗ್ರಾಮದ ಸ.ನಂ.10/1 ರಲ್ಲಿ 1-00 ಎಕರೆ, ಸ.ನಂ.19ರಲ್ಲಿ 2-08 ಎಕರೆ: ಗುಂಟೆ ಮತ್ತು ಸ.ನಂ.20ರಲ್ಲಿ 2-00 ಎಕರೆ ಗ್ರಾಮದ ಸ.ನಂ. ಒಟ್ಟು 9-37 ಎಕರೆ: ಗುಂಟೆ ಜಮೀನನ್ನು ಈರಣ್ಣ ಟ್ರಸ್ಟ್ ನಂ.79, ಕೊಂಡಶೆಟ್ಟಿಹಳ್ಳಿ ರಸ್ತೆ, ಮಾವಳ್ಳಿಪುರ, ಹೆಸರಘಟ್ಟ ಹೋಬಳಿ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಬೆಂಗಳೂರು-560089 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (I)(II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ. ಟಿ/ಐ/ಇ 47 ಶಾಸನ 2001 ಬೆಂಗಳೂರು ದಿನಾಂಕ:23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

**ಷರತ್ತುಗಳು**

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3ರಲ್ಲಿ ಹೇಳಿರುವಂತೆ ಶೇಕಡಾ 55 ಪೆಯಿಡ್ ಆಫ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತು ಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3) ಸದರಿ ಜಮೀನು ಸಿ.ಡಿ.ಪಿ. ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4) ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.

5) ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ., ಒ.ಡಿ.ಪಿ. ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.

6) ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದು ಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.

7) ಈ ಅನುಮತಿ ಭೂ ಸುಧಾರಣೆ ಕಾಯಿದೆ 1961ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್.638

**ಕರ್ನಾಟಕ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯ, ಆಯುಕ್ತರ ಕಛೇರಿ, ಧಾರವಾಡ**

**ಸಂಖ್ಯೆ: ಸಿ2ಸಿ–ಆ: ಸಚಿನ್‌ಹೂ: 2007–08/ 582, ದಿನಾಂಕ:6ನೇ ಮೇ, 2008**

**ಪ್ರಕಟಣೆಗಾಗಿ ವಿವರ**

ಶ್ರೀ ಸಚಿನ್ ಹೂಲಗೇರಿ, ಪ್ರಥಮ ದರ್ಜೆ ಸಹಾಯಕರು, ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ ಧಾರವಾಡ ಇವರು ದಿನಾಂಕ:11.11.2005 ರಿಂದ 18.11.2005ರ ವರೆಗೆ ಪರಿವರ್ತಿತ ರಜೆ ಮಂಜೂರಿಸುವಂತೆ ವಿನಂತಿಸಿ ಅರ್ಜಿ ಸಲ್ಲಿಸಿದ್ದು ಇರುತ್ತದೆ. ದಿನಾಂಕ:19.11.2005 ರಂದು ಮರಳಿ ಕೆಲಸಕ್ಕೆ ಹಾಜರಾಗಬೇಕಾಗಿತ್ತು. ಆದರೆ ಮತ್ತೆ ತಂತಿ ಸಂದೇಶ ಕಳುಹಿಸಿ ರಜೆ ಮಂಜೂರಿಸಲು ಕೋರಲಾಗಿ ಈ ಕಾರ್ಯಾಲಯದಿಂದ ನಿಮಗೆ ರಜೆ ನಿರಾಕರಿಸಿ ಕೂಡಲೇ ಕೆಲಸಕ್ಕೆ ಹಾಜರಾಗಲು ದಿನಾಂಕ:29.06.2006, 25.07.2006, 07.08.2006, 10.11.2006 ಮತ್ತು ಅಂತಿಮವಾಗಿ ದಿನಾಂಕ:25.09.2007 ರಂದು ನೋಟಿಸ್ ನೀಡಿದರು ನಿಮ್ಮಿಂದ ಯಾವುದೇ ಪ್ರತಿಕ್ರಿಯೆ ಇಲ್ಲ.

ಕಾರಣ ನಿಮ್ಮ ಈ ಅನಧಿಕೃತ ಗೈರು ಹಾಜರಾತಿಯಿಂದ ಕಛೇರಿಯ ದೈನಂದಿನ ಕೆಲಸಕ್ಕೆ ತೊಂದರೆ ಉಂಟು ಮಾಡುವುದರ ಜೊತೆಗೆ ಸರ್ಕಾರದ ಸೇವೆಯಲ್ಲಿ ಮುಂದುವರೆಯಲು ನಿಮಗೆ ಆಸಕ್ತಿ ಇಲ್ಲವೆಂಬುದು ಸಾಬೀತಾಗಿದೆ. ಈ ಪ್ರಕಟಣೆ ಮೂಲಕ ನಿಮಗೆ ಅಂತಿಮ ನೋಟಿಸ್ ನೀಡುತ್ತಾ 07 ದಿನಗಳ ಒಳಗಾಗಿ ನಿಮ್ಮ ಅನಧೀಕೃತ ಗೈರು ಹಾಜರಾತಿಗೆ ಕಾನೂನು ರೀತ್ಯಾ ದೃಢಪಡಿಸಬಹುದಾದ ದಾಖಲೆಗಳೊಂದಿಗೆ ಈ ಕಛೇರಿಗೆ ಹಾಜರಾಗಲು ತಿಳಿಸಿದೆ. ತಪ್ಪಿದಲ್ಲಿ ಕ.ನಾ.ಸೇ.ನಿಯಮ ಮತ್ತು ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ 1957ರ ನಿಯಮಗಳಡಿಯಲ್ಲಿ ನಿಮ್ಮನ್ನು ಸೇವೆಯಿಂದ ವಜಾ ಮಾಡಲಾಗುವುದು.

ಸ್ಥಳ: ಧಾರವಾಡ
ದಿನಾಂಕ:06.05.2008
ಪಿ.ಆರ್.550

ಪ್ರಭಾರಿ ಆಯುಕ್ತರು,
ಸಾರ್ವಜನಿಕ ಶಿಕ್ಷಣ ಇಲಾಖೆ,
ಧಾರವಾಡ.

**ಕರ್ನಾಟಕ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯ, ಆಯುಕ್ತರ ಕಛೇರಿ, ಧಾರವಾಡ**

**ಸಂಖ್ಯೆ: ಸಿ2ಸಿ-ಅನಧಿಕೃತ ಗೈರು: 2007-08/ 581, ದಿನಾಂಕ:6ನೇ ಮೇ, 2008**

**ಪ್ರಕಟಣೆಗಾಗಿ ವಿವರ**

ಶ್ರೀಮತಿ ವ್ಹಿ. ಪದ್ಮಾವತಮ್ಮ, ಅಧೀಕ್ಷಕರು, ಆಯುಕ್ತರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ ಧಾರವಾಡ ಇವರು ದಿನಾಂಕ:19.08.2007 ರಿಂದ 30.11.2007ರ ವರೆಗೆ ರಜೆ ಮಂಜೂರಿಸುವಂತೆ ವಿನಂತಿಸಿ ಅರ್ಜಿ ಸಲ್ಲಿಸಿದ್ದು ಇರುತ್ತದೆ. ದಿನಾಂಕ:01.12.2007ರಂದು ಮರಳಿ ಕೆಲಸಕ್ಕೆ ಹಾಜರಾಗಬೇಕಾಗಿತ್ತು. ಆದರೆ ಮತ್ತೆ ತಂತಿ ಸಂದೇಶ ಕಳುಹಿಸಿ ರಜೆ ಮಂಜೂರಿಸಲು ಕೋರಲಾಗಿ ಈ ಕಾರ್ಯಾಲಯದಿಂದ ನಿಮಗೆ ರಜೆ ನಿರಾಕರಿಸಿ ಕೂಡಲೇ ಕೆಲಸಕ್ಕೆ ಹಾಜರಾಗಲು ದಿನಾಂಕ:10.12.2007, 29.01.2008 ರಂದು ಅಂತಿಮವಾಗಿ ನೋಟಿಸ್ ನೀಡಿದರು ನಿಮ್ಮಿಂದ ಕರ್ತವ್ಯದ ಮೇಲೆ ಹಾಜರಾಗುವ ಬಗ್ಗೆ ಯಾವುದೇ ಪ್ರತಿಕ್ರಿಯೆ ಇಲ್ಲ.

ಕಾರಣ ನಿಮ್ಮ ಈ ಅನಧಿಕೃತ ಗೈರು ಹಾಜರಾತಿಯಿಂದ ಕಛೇರಿಯ ದೈನಂದಿನ ಕೆಲಸಕ್ಕೆ ತೊಂದರೆ ಉಂಟು ಮಾಡುವುದರ ಜೊತೆಗೆ ಸರ್ಕಾರದ ಸೇವೆಯಲ್ಲಿ ಮುಂದುವರೆಯಲು ನಿಮಗೆ ಆಸಕ್ತಿ ಇಲ್ಲವೆಂಬುದು ಸಾಬೀತಾಗಿದೆ. ಈ ಪ್ರಕಟಣೆ ಮೂಲಕ ನಿಮಗೆ ಅಂತಿಮ ನೋಟಿಸ್ ನೀಡುತ್ತಾ 07 ದಿನಗಳ ಒಳಗಾಗಿ ನಿಮ್ಮ ಅನಧೀಕೃತ ಗೈರು ಹಾಜರಾತಿಗೆ ಕಾನೂನು ರೀತ್ಯಾ ದೃಢಪಡಿಸಬಹುದಾದ ದಾಖಲೆಗಳೊಂದಿಗೆ ಈ ಕಛೇರಿಗೆ ಹಾಜರಾಗಲು ತಿಳಿಸಿದೆ. ತಪ್ಪಿದಲ್ಲಿ ಕ.ನಾ.ಸೇ.ನಿಯಮ ಮತ್ತು ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ 1957ರ ನಿಯಮಗಳಡಿಯಲ್ಲಿ ನಿಮ್ಮನ್ನು ಸೇವೆಯಿಂದ ವಜಾ ಮಾಡಲಾಗುವುದು.

ಸ್ಥಳ: ಧಾರವಾಡ
ದಿನಾಂಕ:06.05.2008
ಪಿ.ಆರ್.551

ಪ್ರಭಾರಿ ಆಯುಕ್ತರು,
ಸಾರ್ವಜನಿಕ ಶಿಕ್ಷಣ ಇಲಾಖೆ,
ಧಾರವಾಡ.

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ನಿರ್ದೇಶಕರ ನಡುವಳಿ**

**ವಿಷಯ:** ಕನಕಪುರ ಜಿಲ್ಲೆ, ಕನಕಪುರ ತಾಲ್ಲೂಕು, ಆಲೂರು ಗ್ರಾಮದ ಸರ್ವೆ ನಂ.6ರಲ್ಲಿ 3.20 ಎಕರೆಗೆ ಅಲಂಕಾರಿಕ ಶಿಲೆಗಾಗಿ ಮೆ: ಸಹನಾ ಇಂಟರ್‌ನ್ಯಾಷನಲ್ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:590ರ ಗುತ್ತಿಗೆಯನ್ನು ಪುನರ್ ಸ್ಥಾಪಿಸಿರುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಪತ್ರಸಂಖ್ಯೆ: ಸಿ.ಐ. 192 ಎಂ.ಎಂ.ಎನ್. 2007, ಬೆಂಗಳೂರು, ದಿನಾಂಕ:07.03.2008.

**ಪ್ರಸ್ತಾವನೆ:**

ಕನಕಪುರ ಜಿಲ್ಲೆ, ಕನಕಪುರ ತಾಲ್ಲೂಕು, ಆಲೂರು ಗ್ರಾಮದ ಸರ್ವೆ ನಂ.6ರಲ್ಲಿ 3.20 ಎಕರೆ ವಿಸ್ತೀರ್ಣದಲ್ಲಿ ಅಲಂಕಾರಿಕ ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 590 ರ ಗುತ್ತಿಗೆಯನ್ನು ಮೆ: ಸಹನಾ ಇಂಟರ್ ನ್ಯಾಷನಲ್ ರವರ ಹೆಸರಿನಲ್ಲಿ ದಿನಾಂಕ:31.05.2003 ರಿಂದ 10 ವರ್ಷಗಳಿಗಾಗಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೇ ಗುತ್ತಿಗೆಯನ್ನು ನಿಷ್ಕ್ರೀಯಗೊಳಿಸಿದ ಕಾರಣ ದಿನಾಂಕ:10.03.2006 ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು.

ಅದರಂತೆ ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ 53(2) ರ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು ಅದರಂತೆ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅರ್ಜಿಯನ್ನು ಪರಿಗಣಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಆದೇಶಿಸಿರುವುದರಿಂದ ಈ ಆದೇಶ ಮಾಡಲಾಗಿದೆ.

**ಆದೇಶ**

**ಸಂಖ್ಯೆ: ಗಭೂಇ: ಡಿಸಿಬಿ: ಕಗಗು 590: 2007-08/ 1510 ದಿನಾಂಕ:13ನೇ ಮೇ, 2008**

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಸರ್ಕಾರದ ಪತ್ರದ ದಿನಾಂಕ:07.03.2008 ರಲ್ಲಿ ನಿರ್ದೇಶಿಸಿರುವಂತೆ ಕನಕಪುರ ಜಿಲ್ಲೆ, ಕನಕಪುರ ತಾಲ್ಲೂಕು, ಆಲೂರು ಗ್ರಾಮದ ಸರ್ವೆ ನಂ.6ರಲ್ಲಿ 3.20 ಎಕರೆ ವಿಸ್ತೀರ್ಣದಲ್ಲಿ ಅಲಂಕಾರಿಕ ಶಿಲೆಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 590 ರ ಗುತ್ತಿಗೆಯನ್ನು ಮೆ: ಸಹನಾ ಇಂಟರ್ ನ್ಯಾಷನಲ್ ರವರ ಹೆಸರಿನಲ್ಲಿ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 590ರ ಗುತ್ತಿಗೆ ರದ್ದುಗೊಳಿಸಿದ ದಿನಾಂಕ:10.03.2006 ರಿಂದ ಗುತ್ತಿಗೆಯನ್ನು ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮಗಳ ಷರತ್ತಿಗೆ ಒಳಪಡಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ. ಕಲ್ಲು ಗಣಿ ಗುತ್ತಿಗೆ ಅವಧಿ ಹಾಗೂ ಇನ್ನಿತರ ಷರತ್ತಿನಂತೆ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ.

ಪಿ.ಆರ್.534

ನಿರ್ದೇಶಕರು.

**ಕಂದಾಯ ಇಲಾಖೆ**

**ತಿದ್ದುಪಡಿ**

**ಸಂಖ್ಯೆ: ಕಂಇ 272 ಮುಸೇವಿ 2007, ಬೆಂಗಳೂರು, ದಿನಾಂಕ:5ನೇ ಜೂನ್, 2008**

ದಿನಾಂಕ:28.05.2008ರ ಅಧಿಸೂಚನೆ ಸಂಖ್ಯೆ: ಕಂಇ 272 ಮುಸೇವಿ 2007ರ ಎರಡನೇ ಷರತ್ತಿನಲ್ಲಿ ಜನ್ಮ ದಿನಾಂಕ, ವಿದ್ಯಾರ್ಹತೆ (ಅಂಕಪಟ್ಟಿ) ಹಾಗೂ ನಡತೆಗೆ ಸಂಬಂಧಿಸಿದ ಮೂಲ ದಾಖಲಾತಿಗಳನ್ನು ಅಭ್ಯರ್ಥಿಗಳು ಸಂಬಂಧಪಟ್ಟ ಕಾಲೇಜಿನ ಪ್ರಾಂಶುಪಾಲರಿಗೆ ಸಲ್ಲಿಸತಕ್ಕದ್ದು ಎಂಬುದರ ಬದಲಾಗಿ ಜನ್ಮ ದಿನಾಂಕ, ವಿದ್ಯಾರ್ಹತೆ (ಅಂಕಪಟ್ಟಿ) ಹಾಗೂ ನಡತೆಗೆ ಸಂಬಂಧಿಸಿದ ಮೂಲ ದಾಖಲಾತಿಗಳನ್ನು ಅಭ್ಯರ್ಥಿಗಳು ಪರಿಶೀಲನೆಗಾಗಿ, ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ, ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.678

**ಎಲ್.ಎಸ್. ಶ್ರೀಕಂಠಬಾಬು**

ಪೀಠಾಧಿಕಾರಿ,

ಕಂದಾಯ ಇಲಾಖೆ (ಮುಜರಾಯಿ).

**PUBLIC WORKS, PORT & INLAND WATER TRANSPORT DEPARTMENT**

**Office of the Executive Engineer, No.1 Buildings Division, SJP Campus, K.R. Circle, Bangalore-560 001**

**Ref: No.EE/BLD-1/JE-3/ CONL-SERVICE/Dr.B.R.A. Bhavan / B'lore-40/ 2008-09/135, Dated:16th June, 2008**

Executive Engineer, No.1 Buildings Division, KPWP & IWTD, Bangalore-01 invites Proposals to provide the Consulting Services for the Work of Renovation and improvement works to be carried out in Dr. B.R. Ambedkar Bhavan, Miller Road, Bangalore. More details on the services are provided in the document.

The Consultant will be selected under Least Cost Selection (LCS) procedures described in the request for proposals document.

Consultancy Firms/ Architect Firms who are interested in taking up the work may apply to the Executive Engineer, No.1 Buildings Division, Bangalore for obtaining the Consultancy Assignment Documents against an application fee of Rs.2000/- in the form of DD drawn in favour of the Executive Engineer, No.1 Buildings Division, Bangalore payable at Bangalore.

The last date for application and for receiving the document is 07.07.2008 and for receipt of sealed documents is 14.07.2008.

All other information regarding the work can be obtained from the above office during office hours.

Executive Engineer,

PR-679

No.1 Buildings Division, KPWP & IWTD, SJP Campus, Bangalore-560001

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on 'printed circuit boards'

**Ref:** Application Dated:08.04.2008 of M/s P.C. Process Pvt Ltd., V-3(C), 14th Cross, KSSIDC Industrial Estate, Peenya 2nd Stage, Bangalore-560 058.

In its application Dated:08.04.2008 cited above, M/s P.C. Process Pvt Ltd., V-3(C), 14th Cross, KSSIDC Industrial Estate, Peenya 2nd Stage, Bangalore-560 058 have sought clarification regarding the rate of tax applicable on 'printed circuit boards'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.07/08-09, Dated:4th June, 2008**

It is hereby clarified that 'printed circuit boards' covered under Central Excise Tariff Code 8534 00 00 are liable to 4% VAT under entry Sl.No.14 of the table in the notification No.FD 116 CSL 2006(9), Dated:31.03.2006.

**B.A. HARISH GOWDA**

PR-680

Commissioner of Commercial Taxes,
(Karnataka), Bangalore.

**COMMERCIAL TAXES DEPARTMENT**

**PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003**

**Sub:** KVAT Act, 2003-Clarification under Section 59(4) regarding the rate of tax applicable on 'Isopropy1 alcohol'.

**Ref:** Application Dated:10.02.2008 of M/s G.A.G. Trading Company, No.320, Avenue Road, Bangalore-560 002.

In its application Dated:10.02.2008 cited above, M/s G.A.G. Trading Company, No.320, Avenue Road, Bangalore-560 002 have sought clarification regarding the rate of tax applicable on 'Isopropy1 alcohol'.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**Clarification No. CLR.CR.06/07-08, Dated:4th June, 2008**

It is hereby clarified that 'Isopropy1 alcohol' is taxable at 12.5% under Section 4(1)(b) of the Karnataka Value Added Tax Act, 2003.

**B.A. HARISH GOWDA**

PR-681

Commissioner of Commercial Taxes,
(Karnataka), Bangalore.

